# ಶ್ರೀದತ್ತ ಉಪಾಸನಾ ಕೈಪಿಡಿಯು

## ಎರಡನೆಯ ಆವೃತ್ತಿಗೆ ಕಾಣಿಕೆ ಕೊಟ್ಟವರು

ಶ್ರೀಮಾನ್ ಗಣಪತರಾವ ಮೊದಬ, ಅಂದಲಗಿ ಇವರು
ತಮ್ಮ ತಾಯಿಯವರ ಸ್ಮರಣಾರ್ಥ ೧೦
,, ದತ್ತಾತ್ರಯ ಗಣಪತರಾವ ದೇಸಾಯಿ, ಹಾನಗಲ್ಲ ೧೦
,, ಕೆ. ಎಸ್. ಹೆಬ್ಬಾರ, ಭಾರತ ಟೀ ಕ್ಲಬ್ ,, ೫
,, ಶ್ರೀಪಾದ ಲಕ್ಷ್ಮಣರಾವ ಕುಲಕರ್ಣಿ, ಹುಬ್ಬಳ್ಳಿ ೫
,, ಶಿವಾಜಿ ದಾದೋ ದೇಶಪಾಂಡೆ, ಬಮ್ಮನಹಳ್ಳಿ ೫
,, ಗಣಪತರಾವ ದೇಶಪಾಂಡೆ, ಹಾನಗಲ್ಲ ೫
,, ರಾಮಚಂದ್ರ ನೀಲಕಂಠ ದೇಶಪಾಂಡೆ, ಅಂದಲಗಿ ೨
,, ವಾಸುದೇವರಾವ ಶ್ರೀನಿವಾಸರಾವ ಇನಾಮದಾರ,
ವಕೀಲ, ಧಾರವಾಡ ೨
,, ದ. ಲ. ಪಾಟೀಲ, ಕೋಳಿವಾಡ ೨
,, ಮಲ್ಹಾರಭಟ್ಟ ನರೇಂದ್ರ, ತಡಸ ೨
ಡಾ. ಅನಂತ ರಾಮಚಂದ್ರ ಹರ್ಡೀಕರ, ತಿಳವಳ್ಳಿ ೨
ಗ. ಭಾ. ನರ್ಮದಾಬಾಯಿ ಜಗನ್ನಾಥರಾವ ಕುಲಕರ್ಣಿ, ಅಂದಲಗಿ ೨
ಶ್ರೀಮಾನ್ ವ್ಹಿ. ಆರ್. ಪಾಟೀಲ, ವಿಜಾಪೂರ ೧
,, ಎಸ್. ಟಿ. ರಾಣೆಬೆನ್ನೂರ, ಲಕ್ಷ್ಮೇಶ್ವರ ೧
,, ಬಿ. ಎನ್. ನಾಡಿಗೇರ, ವಕೀಲ, ಹಾವೇರಿ ೧
,, ಎಸ್. ಜಿ. ಜೊಯ್ಸಿ, ಕಂಟ್ರಾಕ್ಟರ, ಹಾವೇರಿ ೧
,, ಅಣ್ಣಂಭಟ್ಟ ಲಕ್ಷ್ಮೇಶ್ವರ, ಹಾವೇರಿ ೧
,, ಶಿವರಾಮಭಟ್ಟ ರಾಜಪುರೋಹಿತ, ಹಾವೇರಿ ೧
,, ವಿಷ್ಣಪ್ಪಾ ವೆಂಕಪ್ಪಾ ಶಾನಭಾಗ, ಹಾವೇರಿ ೧।
,, ರಾಮಚಂದ್ರ ಗಣೇಶ ನಾಡಿಗೇರ, ತಿಳವಳ್ಳಿ ೧
,, ಹುಚ್ಚರಾವ ಬಳವಂತರಾವ ಸವಣೂರ, ಹಾವನೂರ ೧
,, ಚಿಲ್ಲರ ಒಟ್ಟು ೧



# ಶ್ರೀದತ್ತ ಉಪಾಸನಾ ಕೈಪಿಡಿ

ಅನಂತಶಾಸ್ತ್ರಂ ಬಹುವೇದಿತವ್ಯಂ
ಸ್ವಲ್ಪಶ್ಚ ಕಾಲೋ ಬಹವಶ್ಚ ವಿಘ್ನಾ: ।
ತತ್ಸಾರಭೂತಂ ತದುಪಾಸಿತವ್ಯಂ
ಹಂಸೋ ಯಥಾ ಕ್ಷೀರಮಿವಾಂಬುಮಿಶ್ರಂ ॥

ಸಂಗ್ರಾಹಕರು ಮತ್ತು ಪ್ರಕಾಶಕರು:

ದ. ವಾ. ಶಿಂದಗಿ

ಬಮ್ಮನಹಳ್ಳಿ

# ಪುರಸ್ಕಾರ

ಬಿಜ್ಜನಹಳ್ಳಿಯ ಪರಮಾರ್ಥಸಾಧನಮಂಡಲದವರು ಅನೇಕ ಬಗೆಯಿಂದ ಅಭಿನಂದನೆಗೆ ಅರ್ಹರಾಗಿದ್ದಾರೆ. ಅವರು ಸ್ವತಃ ಭಗವದ್ಭಜನೆಯ ಸುಖವನ್ನು ಸವಿಯುತ್ತಿರುವರಲ್ಲದೆ, ಎರಡನೆಯವರಿಗೂ ಅದನ್ನು ಉಣ ಬಡಿಸುತ್ತಿದ್ದಾರೆ. ಆ ಮಂಡಲದ ಸಂಘಟಕರಾದ ಶ್ರೀ ದ. ವಾ. ಶಿಂದಗಿಯವರು ಮೊದಲು ದೇಶದ ರಾಜಕೀಯ ಚಳವಳಿಯಲ್ಲಿ ಸೇರಿ ಕೆಲಸ ಮಾಡಿದವರು. ಅಲ್ಲಿ ಅವರು ಸಾಮಾನ್ಯರೊಡನೆ ಬೆರೆತು, ಅವರ ಒಲವನ್ನು ಅರಿತುಕೊಂಡರು. ಅವರ ಸಂಘಟನೆ ಮಾಡುವ ನೈಪುಣ್ಯವನ್ನು ಪಡೆದುಕೊಂಡರು. ಅದಕ್ಕೆ ಬೇಕಾಗಿದ್ದ ಸ್ವಾರ್ಥತ್ಯಾಗ, ಪ್ರಾಮಾಣಿಕತೆ, ಓರಣ, ಅಚ್ಚುಕಟ್ಟುತನ, ಶಿಸ್ತು, ಸ್ವಚ್ಛತೆ, ಪರೋಪಕಾರಬುದ್ಧಿ, ನಿರ್ದಾಕ್ಷಿಣ್ಯವಾದ ಬಿಗುವು, ಇವೇ ಮೊದಲಾದ ಗುಣಗಳು ಅವರಲ್ಲಿ ಮೊದಲಿನಿಂದ ಮನೆಮಾಡಿಕೊಂಡಿದ್ದವು. ಈ ಎಲ್ಲ ಗುಣಗಳು ಅವರೀಗ ಕೈಕೊಂಡಿರುವ ಪರಮಾರ್ಥ ಪ್ರಸಾರದಲ್ಲಿ ಅವರಿಗೆ ಒಳ್ಳೇ ಸಹಾಯಕವಾಗಿವೆ. ನಿಜವಾದ ಕಾರ್ಯಕರ್ತರು ಪರಮಾರ್ಥದಲ್ಲಿ ಪ್ರವೇಶ ಮಾಡಿದರೆ, ಸಮಾಜದ ನೀತಿಯನ್ನು ತಿದ್ದಿ, ಅದರಲ್ಲಿ ಸ್ವಾವಲಂಬನೆಯ ಬೀಜವನ್ನು ಬಿತ್ತಿ, ಪರಮಾತ್ಮನೆಡೆಗೆ ಅದನ್ನೊಯ್ಯುವ ಕೆಲಸವು ಭರದಿಂದಾಗುವದು. ಶ್ರೀ. ಶಿಂದಗಿಯವರು ಈ ಕೆಲಸವನ್ನು ಮಾಡುತ್ತಿರುವದು ಬಹಳ ಶ್ರೇಯಸ್ಕರವಾಗಿದೆ. ದೇವರು ಅವರಿಗೆ ಆಯುರಾರೋಗ್ಯಗಳನ್ನು ಕೊಟ್ಟು, ಅವರಿಂದ ಈ ಕೆಲಸವು ಕರ್ನಾಟಕದ ತುಂಬೆಲ್ಲ ಹೆಚ್ಚು ಹೆಚ್ಚಾಗಿ ಆಗುವಂತೆ ಅನುಗ್ರಹಿಸಲೆಂದು ಬೇಡಿಕೊಳ್ಳುತ್ತೇನೆ.

ಈಗ ಅವರು ಕರ್ನಾಟಕದ ಪರಮಾರ್ಥಸಾಧಕರಿಗೆ "ದತ್ತೋಪಾಸನೆಯ "ಕೈಪಿಡಿ"ಯನ್ನು ಕೊಡುತ್ತಿರುವರು. ಕರ್ನಾಟಕದಲ್ಲಿ ದತ್ತೋಪಾಸಕರು ಬೇಕಾದಷ್ಟು ಜನರಿದ್ದಾರೆ. ಅವರೆಲ್ಲ ಇಲ್ಲಿಯವರೆಗೆ ಅನಿರ್ವಾಹವೆಂದು ಮರಾಠೀ ಭಾಷೆಯೊಳಗಿನ ಸ್ತೋತ್ರಾದಿಗಳನ್ನೇ ಅನ್ನುತ್ತಿದ್ದರು. ಆದರೆ ಅವುಗಳಲ್ಲಿ ಅಡಕವಾಗಿದ್ದ ಭಾವಗಳು ಆ ಭಾಷೆಯ ಅಜ್ಞಾನದ ಮೂಲಕ ಕನ್ನಡಿಗರ ಹೃದಯದಲ್ಲಿ ಇಳಿಯುವದು ಕಠಿಣವಾಗುತ್ತಿತ್ತು. ಅರ್ಥದ ಜ್ಞಾನವಾಗದಿರುವದರಿಂದ, ಅವರ ಉಪಾಸನೆಯು ಯಾಂತ್ರಿಕ ರೂಪವನ್ನು ತಳೆಯುವಂತಾಗಿತ್ತು. ಈ ಕೊರತೆಯು ಈ ಚಿಕ್ಕ ಹೊತ್ತಿಗೆಯಿಂದ ದೂರಾಗಿದೆ.

ದತ್ತೋಪಾಸನೆಯ ಅಂಗಾಂಗಗಳೆಲ್ಲ ಈ ಪುಸ್ತಕದಲ್ಲಿ ಬಂದಿರುವದಿಲ್ಲ. ಯಾವುದೊಂದು ದೇವರ ಉಪಾಸನೆಗೆ ಆಯಾ ದೇವರ ಮಂತ್ರ, ಗೀತಾ, ಸಹಸ್ರನಾಮ, ಹೃದಯ, ರಕ್ಷಾ ಅಥವಾ ಕವಚ ಮೊದಲಾದವುಗಳೂ ಬೇಕಾಗುತ್ತವೆ, ದೇವರ ಮಹಾತ್ಮ್ಯವನ್ನುಸುರುವ ಪುರಾಣಾದಿಗಳೂ ಆವಶ್ಯಕವಾಗಿವೆ. ಆದರೆ ಇಲ್ಲಿ ದತ್ತೋಪಾಸಕರಿಗೆ ನಿತ್ಯಕ್ರಮ ಮತ್ತು ನೈಮಿತ್ತಿಕ ಉತ್ಸವಗಳಿಗೆ ಬೇಕಾಗುವಷ್ಟು ಸಾಹಿತ್ಯವನ್ನು ಒದಗಿಸಿದ್ದಾಗಿದೆ. ಇದರಿಂದ ದತ್ತೋಪಾಸಕರ ಉಪಾಸನೆಗೆ ಬಹಳ ಸಹಾಯವಾಗುವಂತಿದೆ ಎಂಬುದು ನಿರ್ವಿವಾದವಾಗಿದೆ. ಮಂತ್ರ, ಗೀತಾ, ಸಹಸ್ರನಾಮ, ಸ್ತೋತ್ರ ಮೊದಲಾದವುಗಳನ್ನೊಳಗೊಂಡ ದತ್ತೋಪಾಸನೆಯ ಇನ್ನೊಂದು ಭಾಗವು ಆದಷ್ಟು ಬೇಗನೆ ಪ್ರಕಟವಾಗುವ ಯೋಗ ಬರಲೆಂದು ಹಾರೈಸುತ್ತೇನೆ.

ಉಪಾಸನೆಯೆಂದರೆ ದೇವರನ್ನು ಸಮೀಪಿಸುವ ನೇರವಾದ ಸಾಧನವು. ಅದು ಮುಖ್ಯವಾಗಿ ಮಾನಸಿಕ ಕ್ರಿಯೆಯಾಗಿದೆ. ಸಾಕ್ಷಾತ್ಕಾರವೆ ಅದರ ಗುರಿ. ಶಬ್ದಗಳ ಮುಖಾಂತರ ಅವುಗಳ ಅರ್ಥವನ್ನು ಅನುಸಂಧಾನ ಮಾಡುವದೇ ಈ ಪುಸ್ತಕದಲ್ಲಿ ಹೇಳಿಕೊಟ್ಟಿರುವ ಉಪಾಸನೆಯ ತಿರುಳಾಗಿದೆ. ಎಂದರೆ ಅರ್ಥಾನುಸಂಧಾನವೇ ಮುಖ್ಯ. ಅದು ಸ್ವಭಾಷೆಯೊಳಗಿನ ಸ್ತೋತ್ರಾದಿಗಳಿಂದಲೇ ಸಾಧ್ಯವೆಂಬುದು ಸರ್ವಸಮ್ಮತವಾದ ಮಾತು. ಮನಸ್ಸನ್ನು ದೇವರ ವಿಚಾರಗಳಿಂದ ತುಂಬಿಬಿಡಬೇಕು. ಎಷ್ಟರಮಟ್ಟಿಗೆ ಎಂದರೆ ಮನಸ್ಸಿನಲ್ಲಿ ಬೇರೆ ವಿಷಯಗಳಿಗೆ ಸ್ಥಳವೇ ಇಲ್ಲದಂತಾಗಬೇಕು. ಆದರೆ ಮನಸ್ಸು ಸ್ವಭಾವತಃ ಚಂಚಲವಾದ ವಸ್ತುವು. ಒಂದೇ ವಸ್ತುವಿನಲ್ಲಿ ನಿಲ್ಲುವದು ಅದಕ್ಕೆ ಕಷ್ಟವಾಗುತ್ತದೆ. ಆದುದರಿಂದ ಮನಸ್ಸಿನ ಚಾಂಚಲ್ಯಕ್ಕೆ ಎಡೆ ಮಾಡಿಕೊಡದೆ, ಏಕಾಗ್ರತೆಯು ಸಾಧ್ಯವಾಗುವಂತೆ ಉಪಾಸನೆಯ ಕ್ರಮಗಳಿರಬೇಕಾಗುತ್ತದೆ. ಅದು ಈ ಪುಸ್ತಕದಲ್ಲಿ ಚೆನ್ನಾಗಿ ಸಾಧಿಸಿದೆ. ಪರಬ್ರಹ್ಮಮೂರ್ತಿಯನ್ನು ಶ್ರೀ ದತ್ತನೆಂಬ ರೂಪದಿಂದ ಭಜಿಸುವದೇ ಈ ಪುಸ್ತಕದ ಏಕಮೇವ ಧ್ಯೇಯವಾಗಿದೆ. ಆದರೆ ಆ ಭಜನೆಯ [illegible]

ಕೊನೆಗೆ, ಕನ್ನಡಿಗರು ಈ ಪುಸ್ತಕದ ಪೂರ್ಣಲಾಭವನ್ನು ತಕ್ಕೊಳ್ಳಬೇಕೆಂದು ಬಿನ್ನವಿಸುತ್ತೇನೆ.

ಶ್ರೀ ಸ್ವಾಮಿಸಮರ್ಥ ಸದನ
ದೇಶಪಾಂಡೆಗಲ್ಲಿ, ಧಾರವಾಡ.
೨೬—೧—೧೯೫೪

ಕುಲಕರಣಿ ನಾರಾಯಣರಾಯರು

# ನಮ್ಮ ನುಡಿ

## ( ಮೊದಲನೆಯ ಆವೃತ್ತಿ )

ತ್ರೈಮೂರ್ತಿ ಸ್ವರೂಪನಾದ ಶ್ರೀ ಸದ್ಗುರು ದತ್ತಾತ್ರೇಯನ ಮಹಿಮೆಯು ಅದ್ಭುತವಾಗಿರುವದು. ಆತನ ಉಪಾಸನೆಯಿಂದ ಪಾಪ ತಾಪ ದೈನ್ಯಗಳೂ ರೋಗ ದಾರಿದ್ರ್ಯ ಭೂತಬಾಧಾದಿಗಳೂ ನಾಶವಾಗುವವಲ್ಲದೆ ನಿಷ್ಕಾಮದಿಂದ ಉಪಾಸನೆ ಮಾಡುವವರಿಗೆ ಇಹದಲ್ಲಿ ಸುಖ-ಶಾಂತಿಯೂ ಪರತ್ರದಲ್ಲಿ ಮೋಕ್ಷವೂ ಲಭಿಸುವದು. ಅದರಂತೆ ಉಪಾಸನೆಯನ್ನು ಮಾಡಿ ಹಿಂದೆ ಅನೇಕ ಜನರು ಶ್ರೀ ಸದ್ಗುರು ಕೃಪೆಯ ಲಾಭ ಹೊಂದಿರುವರಲ್ಲದೆ, ಇಂದಿಗೂ ಅಂಥವರನ್ನು ನೋಡಬಹುದು; ಮಾಡಿ ಪಡೆಯಲೂ ಬಹುದು. ಅದರೆ ಸದ್ಗುರುವಿನ ಮಹಿಮೆಯು ಗೊತ್ತಾಗದೆ, ಆತನ ಉಪಾಸನೆಯಲ್ಲಿ ಪ್ರೇಮ ಹುಟ್ಟಲಾರದು. ಶ್ರೀ ಸದ್ಗುರು ದತ್ತಾತ್ರೇಯನ ಮಹತ್ವವು ಶ್ರೀಗುರು ಚರಿತ್ರೆಯ ಪಾರಾಯಣ ಮತ್ತು ಪುರಾಣ ಶ್ರವಣದಿಂದಲೂ ಶ್ರೀ ದಿಗಂಬರ ಅಖಂಡ ನಾಮ ಸಪ್ತಾಹದಿಂದಲೂ ಗೋಚರವಾಗುವದು.

ಈ ಪ್ರಕಾರದ ಮಹತ್ವಪೂರ್ಣವಾದ ಶ್ರೀ ಗುರು ಚರಿತ್ರೆಯ ಸಪ್ತಾಹದ ಕಾಲಕ್ಕೂ ಶ್ರೀ ದಿಗಂಬರ ನಾಮಸಪ್ತಾಹದ ಕಾಲಕ್ಕೂ ನಿತ್ಯ ಉಪಾಸಕರಿಗೂ ಅಲ್ಲದೆ ಶ್ರೀ ದತ್ತ ಜಯಂತಿ ಮೊದಲಾದ ಉತ್ಸವದ ಕಾಲಕ್ಕೂ ಉಪಯೋಗ ಬೀಳುವ, ಸಮಯ ಸಂದರ್ಭಕ್ಕೆ ಹೊಂದುವಂತಹ ಕ್ರಮಬದ್ಧವಾದ ಒಂದು ಸಾಹಿತ್ಯ ಸಂಗ್ರಹವು ಕನ್ನಡಲ್ಲಿ ಅವಶ್ಯವೆನಿಸಿದ್ದರಿಂದ ಈ ಕಾರ್ಯವನ್ನು ಕೈಕೊಂಡಿರುವೆವು. ಮತ್ತು ಶ್ರೀ ದತ್ತಾತ್ರೆಯನ ಪಲ್ಲಕ್ಕಿ ಸೇವೆಯು ಕೂಡಾ ಪೂರ್ಣ ಕನ್ನಡ ಪದ್ಯಸ್ತೋತ್ರದಿಂದಲೇ ನಡೆಯುವಂತೆ ಕೂಡಿಸಿರುವೆವು. ಅಲ್ಲದೆ ಅನೇಕ ದತ್ತ ಭಕ್ತರ ಸಹಾಯ ದೊರೆತದ್ದರಿಂದ ಈ ಪುಸ್ತಕದ ಬೆಲೆಯನ್ನು ಕೂಡಾ ಬಹಳ ಕಡಿಮೆ ಇಟ್ಟಿರುವೆವು ಕರ್ನಾಟಕದ ದತ್ತ ಪ್ರೇಮಿಗಳೆಲ್ಲರೂ ಇದರ ಲಾಭ ಪಡೆದುಕೊಳ್ಳಬೇಕಾಗಿ ಪ್ರಾರ್ಥನೆಯು. ಪ್ರಾಜ್ಞರಿಗೆ ಇದರಲ್ಲಿ ಲೋಪದೋಷಗಳೇನಾದರೂ ಕಂಡಲ್ಲಿ ಸೂಚನೆ ಮಾಡಬೇಕು. ಇನ್ನೊಮ್ಮೆ ಮುದ್ರಿಸುವ ಪ್ರಸಂಗ ಬಂದಲ್ಲಿ ಸರಿಪಡಿಸುವೆವು.

ಈ ನಮ್ಮ ಕಾರ್ಯಕ್ಕೆ ಅನೇಕ ಜನರು ಅನೇಕ ರೀತಿಯಿಂದ ಸಹಾಯ ಮಾಡಿರುವರು. ಅದರಲ್ಲಿ ಬ್ರ। ಶ್ರೀ॥ ಯೋಗೀಶ ದತ್ತಮೂರ್ತಿಯವರು, ಶ್ರೀಮಾನ್ ಹ. ರಾ. ದೇಸಾಯಿ ಹಳೇಹುಬ್ಬಳ್ಳಿ, ವೇ. ಲಿಂಗಾಭಟ್ಟರು ಪೂಜಾರ

ಬಂಕಾಪೂರ, ವೇ. ಮಲ್ಹಾರ ದೀಕ್ಷಿತ ಹಾವೇರಿ, ಗು. ಭ ಪ. ನಾರಾಯಣ ರಾವ ಕುಲಕರ್ಣಿ ಧಾರವಾಡ, ಶ್ರೀ ದತ್ತ ಭಕ್ತ ಮಂಡಲ ಕುಕನೂರ ಇವರು ತಾವು ರಚಿಸಿದ ಪದ್ಯ ಸ್ತೋತ್ರಗಳನ್ನು ಕೊಟ್ಟಿರುವರು. ಮತ್ತು ವೇ. ದತ್ತಂ ಭಟ್ಟ ಮಠದ ಗುತ್ತಲ ಇವರು ರಚಿಸಿದ 'ಭಕ್ತಿಯ' 'ಬೆಳಕಿ' ನಲ್ಲಿಯ ಪ್ರದಕ್ಷಿಣ ನಮನ ಪದವನ್ನು ಪಲ್ಲಕ್ಕಿ ಸೇವೆಯ ಕಾಲಕ್ಕೆ ಉಪಯೋಗಿಸಿರುವೆವು. ಇವ ರೆಲ್ಲರಿಗೂ ನಾವು ಉಪಕೃತರಾಗಿರುವೆವು. ಈ ಪುಸ್ತಕದ ಸಹಾಯಾರ್ಥ ಅನೇಕ ಮಹನೀಯರು ನಾವು ಪ್ರತ್ಯಕ್ಷ ಬೆಟ್ಟಿಯಾಗದಿದ್ದರೂ, ಮತ್ತು ಕೆಲವರಿಗೆ ನಮ್ಮ ಪ್ರತ್ಯಕ್ಷ ಪರಿಚಯವಿಲ್ಲದಿದ್ದರೂ, ಕೇವಲ ವಿಜ್ಞಾಪನೆ ಪತ್ರದ ಮೇಲಿಂದ ಶ್ರೀಗುರು ಕಾರ್ಯದ ಕಡೆಗೆ ಲಕ್ಷ್ಯಗೊಟ್ಟು ಉದಾರ ಬುದ್ಧಿಯಿಂದ ಧನ ಸಹಾಯ ಮಾಡಿ ನಮ್ಮನ್ನು ಬಹಳ ಉಪಕೃತರನ್ನಾಗಿ ಮಾಡಿರುವರು ಅವರ ಹೆಸರನ್ನು ಕವರಿನ ಒಳಮುಗ್ಗಲಿಗೆ ಕೊಟ್ಟಿದೆ.

ಕರ್ನಾಟಕದಲ್ಲಿ ಶ್ರೀ ದಿಗಂಬರ ಸಪ್ತಾಹವನ್ನು ಪ್ರಚಾರವಲ್ಲಿ ತಂದವರೂ ಶ್ರೀಗುರು ಸೇವೆಯಲ್ಲಿಯೇ ದೇಹವನ್ನು ಸವೆಸಿ ಗುರು ಅನುಗ್ರಹವನ್ನು ಪಡೆದು ಕೊಂಡವರೂ ಆದ ಶ್ರೀಮಾನ್ ನಾರಾಯಣರಾವ ಕುಲಕರ್ಣಿ ಪ್ರೊಫೆಸರ ಕೆ. ಈ. ಬೋರ್ಡ ಕಾಲೇಜ, ಧಾರವಾಡ ಇವರು ನಾವು ಈ ಪುಸ್ತಕವನ್ನು ಪ್ರಿಂಟು ಮಾಡಿಸುವ ಇಚ್ಛೆಯನ್ನು ತಿಳಿಸಿದ ಕೂಡಲೆ ಅತ್ಯಂತ ಆನಂದಭರಿತ ರಾಗಿ "ನೀವು ಈ ಕಾರ್ಯವನ್ನು ಅವಶ್ಯವಾಗಿ ಮಾಡಿರಿ. ನಾನು ಸರ್ವ ವಿಧ ದಿಂದಲೂ ಸಹಾಯ ಮಾಡುವೆನು" ಎಂದು ಹೇಳಿ, ಸಹಾಯವನ್ನು ಮಾಡಿದ್ದ-ಲ್ಲದೆ, ಪುರಸ್ಕಾರನುಡಿಯಿಂದ ನಮಗೆ ಶುಭಾಶೀರ್ವಾದವನ್ನೂ ಮಾಡಿರುವರು. ಇದಲ್ಲದೆ ಇನ್ನೂ ಕೆಲವರ ಸಹಾಯವು ನಮಗೆ ಒದಗಿರುವದು. ಈ ಯಾವತ್ತರ ಆಭಾರವನ್ನು ಹೃತ್ಪೂರ್ವಕವಾಗಿ ಮನ್ನಿಸಿ ಶ್ರೀ ಸದ್ಗುರುನಾಥನು ಸಹಾಯ ಸಲ್ಲಿಸಿದ ಸರ್ವರಿಗೂ ಪರಮ ಕೃಪೆಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

**ತಾ|| ೨೬–೧–೫೪ ಪರಮಾರ್ಥ ಸಾಧನ ಮಂಡಲ, ಬಮ್ಮನಹಳ್ಳಿ**

## ( ಎರಡನೆಯ ಆವೃತ್ತಿ )

ಶ್ರೀ ದತ್ತ ಉಪಾಸನಾ ಕೈಪಿಡಿಯ ಎರಡನೆಯ ಆವೃತ್ತಿಯನ್ನು ಪ್ರಕಟಿಸಲು ನಮಗೆ ಪರಮ ಆನಂದವೆನಿಸುವದು. ಏಕೆಂದರೆ, ಮನುಷ್ಯನಿಗೆ ನಿಜವಾದ ಸುಖವು ಪರಮಾತ್ಮನ ಉಪಾಸನೆಯ ಹೊರತು ದೊರೆಯಲಾರದು. ಇದನ್ನರಿಯದಲೆ ಅಜ್ಞಾನಾದ ಮಾನವನು ವಿಷಯದಿಂದಲೇ ಸುಖದೊರೆಯುವ

ದೆಂಬ ಭ್ರಮೆಯಿಂದ ಅನಂತ ಕಷ್ಟಗಳನ್ನೂ, ಅನಂತ ಜನ್ಮಗಳನ್ನೂ ಹೊಂದುತ್ತಾ ಅನರ್ಥ ಪರಂಪರೆಗೆ ಗುರಿಯಾಗುತ್ತಿರುವನು. ಈ ಕಷ್ಟಪರಂಪರೆಯಿಂದ ಪಾರಾಗಲು ಮನುಷ್ಯಜನ್ಮದಲ್ಲಿಯೇ ಮಾತ್ರ ಅವಕಾಶವಿರುವದು. ಅದಕ್ಕಾಗಿಯೇ ಇದು ಮುಕ್ತಿದ್ವಾರವೆನಿಸಿರುವದು. ಆದ್ದರಿಂದ ಪ್ರತಿಯೊಬ್ಬ ಮಾನವನು ವಿವೇಕ ವಿಚಾರ ಪೂರ್ವಕ ನಿತ್ಯ ನಿಯಮದಿಂದ ಪರಮಾತ್ಮನ ನಾಮಸ್ಮರಣ, ಭಜನ, ಧ್ಯಾನಾದಿ ಉಪಾಸನೆಯ ಮೂಲಕ ಅಜ್ಞಾನದಿಂದ ಮನಸ್ಸಿನಲ್ಲಿ ನೆಲಸಿರುವ ವಿಷಯ ವಾಸನೆಯನ್ನು ಕಳೆದುಕೊಂಡು ನಿಜಸುಖವನ್ನು ಪಡೆಯಬೇಕಾಗಿರುವದು.

ಶ್ರೀ ಸದ್ಗುರು ದತ್ತಾತ್ರಯನು ಪರಮಕೃಪಾಳುವೂ, ದಯಾಸಾಗರನೂ, ಭಕ್ತ ಕೈವಾರಿಯೂ ಆಗಿದ್ದು ತನ್ನ ಭಕ್ತರ ಅಭೀಷ್ಟವನ್ನು ಶೀಘ್ರವಾಗಿ ಪೂರೈಸಿ ಇಹ–ಪರ–ಸುಖವನ್ನು ಕೊಟ್ಟು ಕಾಪಾಡುವನೆಂಬದು ಲೋಕ ಪ್ರಶಿದ್ಧವಿರುವದು. ಬಡವ–ಬಲ್ಲಿದರೆಲ್ಲರಿಗೂ ಮನಸ್ಸಿಗೆ ನೆಮ್ಮದಿ ಇಲ್ಲದ ಈಗಿನ ಕಾಲದಲ್ಲಿ ಹೆಚ್ಚು ಜನರಿಗೆ ಶ್ರೀ ಸದ್ಗುರು ಕೃಪೆಯ ಲಾಭವಾಗಬೇಕೆಂಬ ಉದ್ದೇಶದಿಂದ ಜನಸಾಮಾನ್ಯರಿಗೆ ರುಚಿಸುವ, ಸಾಧನಕ್ಕೆ ಸುಲಭವಾಗಿರುವ, ಕಾಲಕ್ಕೆ ತಕ್ಕ ಭಜನ, ಸ್ತೋತ್ರ, ಪದ್ಯಾದಿಗಳನ್ನು ಸಂಗ್ರಹಿಸಿ ಶ್ರೀ ದತ್ತ ಉಪಾಸನಾ ಕೈಪಿಡಿ ಎಂಬ ಪುಸ್ತಕವನ್ನು ಪ್ರಕಟಿಸಿದೆವು.

ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು ಎಂಬಂತೆ ಇದು (ಸಾಧನ ಪರವಾದ್ದರಿಂದ) ಅನೇಕ ಜನರಿಗೆ ನಿತ್ಯ ಉಪಾಸನಕ್ಕೆ ಅತ್ಯಂತ ಉಪಯೋಗವಾಗಿರುವದಲ್ಲದೆ ಸಕಾಮ ಉಪಾಸಕರಿಗೆ ನಿತ್ಯ ಉಪಾಸನೆಯಿಂದ ರೋಗ ನಿವೃತ್ತಿ, ಅಭೀಷ್ಟ ಶಿದ್ಧಿಯಾಗಿರುವ ಉದಾಹರಣೆಗಳೂ ಉಂಟು. ಈ ಪುಸ್ತಕವು ಕರ್ನಾಟಕದಲ್ಲೆಲ್ಲಾ ಪ್ರಚಾರ ಹೊಂದಿ ದೂರ ಪರಪ್ರಾಂತದಲ್ಲಿರುವ ದತ್ತ ಭಕ್ತರಿಗೂ ಉಪಯೋಗವಾಗಿರುವದು. ಇಂಥ ಪರಿಣಾಮಕಾರಿಯಾದ ಕೃತಿಯು ನಮ್ಮಂಥಾ ಅಜ್ಞರಿಂದ ಪ್ರಕಟವಾಗಿ ಈರೀತಿ ಪ್ರಚಾರ ಹೊಂದಿ ಬಹುಜನರಿಗೆ ಪರಮ ಕಲ್ಯಾಣಕ್ಕೆ ಕಾರಣವಾದದ್ದನ್ನು ನೋಡಿದರೆ ಇದರಲ್ಲಿ ಶ್ರೀ ಸದ್ಗುರುನಾಥನ ಕೈವಾಡವು ಇರುವದೆಂಬುದಕ್ಕೆ ಯಾವ ಸಂಶಯವು ಇಲ್ಲಾ. ಇಂಥ ಪವಿತ್ರ ಕಾರ್ಯಕ್ಕೆ ಸಹಾಯ ಮಾಡಿದವರೆಲ್ಲರೂ ಮಹತ್ಪುಣ್ಯದಲ್ಲಿ ಪಾಲುಗಾರರಾಗಿರುವರೆಂದು ಬೇರೆ ಹೇಳಬೇಕಿಲ್ಲಾ.

ಇನ್ನು ಈ ಪುಸ್ತಕದ ಎರಡನೆಯ ಆವೃತ್ತಿಯು ಈಗ ಎರಡು ವರ್ಷ ಮೊದಲೇ ಪ್ರಕಟವಾಗಬೇಕಿತ್ತು. ಆದರೆ ಇದರ ಮೊದಲನೆಯ ಆವೃತ್ತಿಯು

ಪರಮಾರ್ಥ ಸಾಧನ ಮಂಡಲದಿಂದ ಪ್ರಕಟವಾಗಿದ್ದು ಆ ಪುಸ್ತಕಗಳು ವಿಶೇಷ ವಾಗಿ ಸ್ವ-ಪರ ಹಸ್ತದಿಂದ ಧರ್ಮಾರ್ಥವಾಗಿ ಖರ್ಚಾದ ಮೂಲಕಾ ಅವು ಗಳಿಂದ ಆಗತಕ್ಕಷ್ಟು ಆರ್ಥಿಕ ಪ್ರಾಪ್ತಿಯು ಆಗಲಿಲ್ಲಾ. ಮತ್ತು ನನಗಾದರೂ ಪರಮಾತ್ಮನ ಕೃಪೆಯಿಂದ ಏಕಾಂತ ಸಾಧನದ ಅಭಿರುಚಿ ಹತ್ತಿ ಇದರ ಕಡೆಗೆ ಉದಾಶೀನವಾಯಿತು. ಆದರೆ ಈಗ ಪುಸ್ತಕಗಳ ಬೇಡಿಕೆಯು ವಿಶೇಷವಾದ್ದ ರಿಂದ ಮತ್ತು ಪರಮಾರ್ಥ ಸಾಧನ ಮಂಡಲದಿಂದ ಈ ಕಾರ್ಯವು ಸಾಧ್ಯ ವಾಗದ್ದರಿಂದ ಮಂಡಲದ ನಿರ್ಣಯದ ಪ್ರಕಾರಾ ಹಿಂದಿನ ಪುಸ್ತಕಗಳಿಂದ ಬಂದಷ್ಟು ಹಣವನ್ನು ಪರಮಾರ್ಥ ಸಾಧನ ಮಂಡಲದ ಉಪಯೋಗಕ್ಕಾಗಿ ಇಟ್ಟು ನಾನು ಸ್ವತಂತ್ರವಾಗಿ ಇದನ್ನು ಪ್ರಕಟಿಸುತ್ತಿರುವೆನು.

ಮೊದಲಿಗಿಂತ ಈಗ ಕಾಗದದ ಬೆಲೆಯು ಹೆಚ್ಚಾದ್ದರಿಂದ ಹಿಂದಿನಂತೆ ಕೆಲವು ಜನ ಗುರುಭಕ್ತರ ಸಹಾಯ ತೆಗೆದುಕೊಂಡು ಶಕ್ಯವಿದ್ದಷ್ಟು ಸುಲಭ ಬೆಲೆಯನ್ನು ಇಟ್ಟಿರುವೆನು.

"ಇಂದು ಕೋಟಿ ಸುಪ್ರಭಂಚ" ಎಂಬ ಸ್ತೋತ್ರದ ಬದಲು ಶ್ರೀ ಗುರು ಚರಿತ್ರೆಯಲ್ಲಿದ್ದ "ಇಂದು ಕೋಟಿ ತೇಜಕಿರಣ" ಸ್ತೋತ್ರವನ್ನೆ ಹಾಕಿರುವೆನು. ಉಳಿದೆಲ್ಲಾ ವಿಷಯವು ಮೊದಲಿನಂತೆ ಇರುವದು.

ಕಾರಣ ಕರ್ನಾಟಕ ದತ್ತ ಭಕ್ತರು ಇದರ ಉಪಯೋಗ ಮಾಡಿಕೊಂಡು ಶ್ರೀ ಸದ್ಗುರು ಕೃಪೆಗೆ ಪಾತ್ರರಾಗಬೇಕಾಗಿ ಪ್ರಾರ್ಥನೆ.

ಈ ಪುಸ್ತಕಕ್ಕೆ ಸಹಾಯಮಾಡಿದವರೆಲ್ಲರಿಗೂ ನಾನು ಉಪಕೃತ ನಾಗಿರುವೆನಲ್ಲದೆ ಶ್ರೀ ಸದ್ಗುರುನಾಥನು ಅವರಿಗೆ ಪರಮ ಕರುಣೆಯನ್ನು ನೀಡಲೆಂದು ಪ್ರಾರ್ಥಿಸುವೆನು.

**ದ. ವಾ. ಶಿಂದಗಿ, ಬಮ್ಮನಹಳ್ಳಿ**

# ಸೂಚನೆ

ಶ್ರೀದಿಗಂಬರ ಅಖಂಡ ನಾಮಸಪ್ತಾಹದ ಕಾರ್ಯಕ್ರಮವಿದ್ದಲ್ಲಿ ಪ್ರಾತಃ ಕಾಲ ೪-೩೦ ರಿಂದ ೫ ರ ವರೆಗೆ ಶ್ರೀ ದಿಗಂಬರ ನಾಮೋಚ್ಚಾರದ ಮೂಲಕ ನಗರಸಂಕೀರ್ತನೆ. ೫-೦ ರಿಂದ ೬-೦ ರ ವರೆಗೆ ಉತ್ಸವದ ಸ್ಥಳದಲ್ಲಿ ಪ್ರಾತಃ ಸ್ಮರಣ, ಭಜನ, ಕಾಕಡಾರತಿ. ಆಮೇಲೆ ಪೂಜಾ, ಪಾರಾಯಣ. ಮಧ್ಯಾಹ್ನ ೧೨ ಘಂಟೆಗೆ ಮಧುಕರಿ, ನೈವೇದ್ಯ, ಆರತಿ. ಮಧ್ಯಾಹ್ನದ ಮೇಲೆ ೪-೦ ರಿಂದ

೬—೦ ರ ವರೆಗೆ ಪುರಾಣ - ಪ್ರವಚನಾದಿಗಳು. ಸಾಯಂಕಾಲ ೭ ಘಂಟೆಗೆ ಸಾಮೂಹಿಕ ಭಜನೆ, ಮಂತ್ರ ಪುಷ್ಪ ವಗ್ಗೈರೆ ಕಾರ್ಯಕ್ರಮಗಳು.

ಶ್ರೀಗುರುಚರಿತ್ರೆಯ ಪಾರಾಯಣ ಮತ್ತು ಪುರಾಣ ಸಪ್ತಾಹದ ಕಾಲಕ್ಕೆ ಸಪ್ತಾಹ ನಡೆಯುವ ಸ್ಥಳದಲ್ಲಿ ದೇವತಾಸ್ಥಾಪನ ಮಾಡಿಕೊಂಡು, ಪ್ರಾತಃ ಕಾಲ ೫ ರಿಂದ ೬ ರ ವರೆಗೆ ಪ್ರಾತಃಸ್ಮರಣ, ಭಜನ, ಕಾಕಡಾರತಿ. ಆಮೇಲೆ ಪೂಜಾ, ಸಪ್ತಾಹ ಕ್ರಮದ ಪ್ರಕಾರ ಪಾರಾಯಣ ಅಥವಾ ಪುರಾಣ. ಸಾಯಂಕಾಲ ಭಜನ, ಆರತಿ, ಮಂತ್ರಪುಷ್ಪಾದಿಗಳನ್ನು ಮಾಡಬೇಕು.

**ನಿತ್ಯೋಪಾಸನ:—** ಪ್ರತಿದಿನ ಪ್ರಾತಃಕಾಲ ೫ ಘಂಟೆಗೆ ನಿರ್ಮಲವೂ ಪ್ರಶಾಂತವೂ ಆದ ಸ್ಥಳದಲ್ಲಿ ಶ್ರೀಸದ್ಗುರು ದತ್ತಾತ್ರೇಯನ ಭಾವಚಿತ್ರವನ್ನಿಟ್ಟು ಕೊಂಡಾಗಲೀ, ಅಥವಾ ಮನಸ್ಸಿನಲ್ಲಿಯೇ ಶ್ರೀ ಗುರುನಾಥನನ್ನು ಭಾವಿಸಿ ಕೊಂಡಾಗಲೀ, ಪ್ರಾತಃಸ್ಮರಣ, ಕಾಕಡಾರತಿಗಳನ್ನು ಮಾಡಬೇಕು. ಆಮೇಲೆ ಸ್ನಾನದ ನಂತರ ನಿತ್ಯಾಹ್ನಿಕವನ್ನು ತೀರಿಸಿಕೊಂಡು, ಶ್ರೀ ಸದ್ಗುರು ಪೂಜೆ ಯನ್ನು ಅಥವಾ ಮಾನಸ ಪೂಜೆಯನ್ನು ಮಾಡಿ ಕನಿಷ್ಠ ಒಂದು ಅಧ್ಯಾಯ ವನ್ನಾದರೂ ಶ್ರೀ ಗುರುಚರಿತ್ರೆಯ ಪಾರಾಯಣ ಮಾಡಿದ ನಂತರ ಶ್ರೀದತ್ತ ಸ್ತೋತ್ರವನ್ನು ಅನ್ನಬೇಕು. ಆಮೇಲೆ ತಮ್ಮ ನಿತ್ಯವ್ಯವಹಾರದಲ್ಲಿ ತೊಡಗಿ ಅದೂ ಒಂದು ಸದ್ಗುರು ಉಪಾಸನೆ ಎಂದು ತಿಳಿದು ಸತ್ಯ ಮತ್ತು ಪ್ರಾಮಾ ಣಿಕತನದಿಂದ ಮಾಡಬೇಕು. ಮಧ್ಯಾಹ್ನ ಗೋಗ್ರಾಸವನ್ನು ತೆಗೆದು ನೈವೇದ್ಯ ವೈಶ್ವದೇವನನ್ನು ಮಾಡಬೇಕು. ವೈಶ್ವದೇವ ಬರದೇ ಇದ್ದವರು, ಒಂದು ತುತ್ತು ಅನ್ನವನ್ನು ಅಗ್ನಿನಾರಾಯಣನಿಗೆ ಅರ್ಪಿಸಿ, ಸಕಲ ಪ್ರಾಣಿಮಾತ್ರರಲ್ಲಿ ಪರಮಾತ್ಮನನ್ನು ಭಾವಿಸಿ ಸ್ವಲ್ಪ ಆಹಾರವನ್ನು ಹೊರಗೆ ಇಟ್ಟು, ಅತಿಥಿಗಳಾ ರಾದರೂ ಇದ್ದರೆ ಅವರು ಸದ್ಗುರುಸ್ವರೂಪರೆಂಬು ತಿಳಿದು, ಅವರನ್ನು ಆಮಂತ್ರಿಸಿ, ಊಟ ಮಾಡುವ ಅನ್ನವೂ ಸದ್ಗುರುನಾಥನ ಪ್ರಸಾದವೆಂದು ಭಾವಿಸಿ ಭಗವನ್ನಾಮೋಚ್ಚಾರ ಮಾಡುತ್ತ ಊಟಮಾಡಬೇಕು. ಸಾಯಂಕಾಲ ಭಜನೆಯನ್ನು ಮಾಡಬೇಕು. ಶಕ್ಯವಾದರೆ ಕುಟುಂಬದ ಜನರನ್ನೂ ಭಜನೆ ಯಲ್ಲಿ ಕೂಡಿಸಿಕೊಳ್ಳಬೇಕು. ಇಷ್ಟೆಲ್ಲಾ ಮಾಡಲಿಕ್ಕೆ ಆಗದಿದ್ದವರು, ಪ್ರಾತಃ ಸ್ಮರಣ ಮತ್ತು ಸಾಯಂಭಜನೆಯನ್ನಾದರೂ ಮಾಡಬೇಕು. ಕನಿಷ್ಟ ಸಾಯಂಕಾಲದ ಭಜನೆಯನ್ನಾದರೂ ಮಾಡುತ್ತಾ ಹೋಗಬೇಕು. ನಿತ್ಯ ನಿಯಮದಿಂದ ಶ್ರದ್ಧಾ ಭಕ್ತಿಪೂರ್ವಕ ಮಾಡಿದ ಅಲ್ಪಸಾಧನೆಯಿಂದ ಕೂಡಾ ಶ್ರೀಸದ್ಗುರು ಕೃಪಾಲಾಭವಾಗುವದು.

ಶ್ರೀದತ್ತ ಉಪಾಸನಾ ಕೈಪಿಡಿ.



ಆದೌ ಬ್ರಹ್ಮಾ ಮಧ್ಯೇ ವಿಷ್ಣುರಂತೇ ದೇವಃ ಸದಾಶಿವಃ ।
ಮೂರ್ತಿತ್ರಯಸ್ವರೂಪಾಯ ದತ್ತಾತ್ರೇಯ ನಮೋಽಸ್ತು ತೇ ॥

# ಶ್ರೀದತ್ತ ಉಪಾಸನಾ ಕೃತಿ

**ಶ್ರೀಗುರುಭ್ಯೋ ನಮಃ**

**ಪ್ರಾತಃಸ್ಮರಣ**



(ಉದಯರಾಗದಲ್ಲಿ)

ಪ್ರಾತಃಸ್ಮರಾಮಿ ಹೃದಿ ಸಂಸ್ಫುರದಾತ್ಮತತ್ತ್ವಂ
ಸಚ್ಚಿತ್ಸುಖಂ ಪರಮಹಂಸಗತಿಂ ತುರೀಯಂ ।
ಯತ್ ಸ್ವಪ್ನಜಾಗರಸುಷುಪ್ತಮವೈತಿ ನಿತ್ಯಂ
ತದ್ಬ್ರಹ್ಮ ನಿಷ್ಕಲಮಹಂ ನ ಚ ಭೂತಸಂಘಃ ॥ ೧ ॥
ಪ್ರಾತರ್ಭಜಾಮಿ ಮನಸೋ ವಚಸಾಮಗಮ್ಯಂ
ವಾಚೋ ವಿಭಾಂತಿ ನಿಖಿಲಾ ಯದನುಗ್ರಹೇಣ ।
ಯನ್ನೇತಿ ನೇತಿ ವಚನೈರ್ನಿಗಮಾ ಅವೋಚುಃ
ತಂ ದೇವದೇವಮಜಮಚ್ಯುತಮಾಹುರಗ್ರ್ಯಂ ॥ ೨ ॥
ಪ್ರಾತರ್ನಮಾಮಿ ತಮಸಃ ಪರಮರ್ಕವರ್ಣಂ
ಪೂರ್ಣಂ ಸನಾತನಪದಂ ಪುರುಷೋತ್ತಮಾಖ್ಯಂ ।
ಯಸ್ಮಿನ್ನಿದಂ ಜಗದಶೇಷಮಶೇಷಮೂರ್ತೌ
ರಜ್ಜ್ವಾಂ ಭುಜಂಗಮ ಇವ ಪ್ರತಿಭಾಸಿತಂ ವೈ ॥ ೩ ॥
ಸಮುದ್ರವಸನೇ ದೇವಿ ಪರ್ವತಸ್ತನಮಂಡಲೇ
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥ ೪ ॥
ಯಾ ಕುಂದೇಂದುತುಷಾರಹಾರಧವಲಾ ಯಾ ಶುಭ್ರವಸ್ತ್ರಾವೃತಾ
ಯಾ ವೀಣಾವರದಂಡಮಂಡಿತಕರಾ ಯಾ ಶ್ವೇತಪದ್ಮಾಸನಾ ।
ಯಾ ಬ್ರಹ್ಮಾಚ್ಯುತಶಂಕರಪ್ರಭೃತಿಭಿರ್ದೇವೈಃ ಸದಾವಂದಿತಾ
ಸಾ ಮಾಂ ಪಾತು ಸರಸ್ವತೀ ಭಗವತೀ ನಿಃಶೇಷಜಾಡ್ಯಾಪಹಾ ॥ ೫ ।

ವಕ್ರತುಂಡ ಮಹಾಕಾಯ ಸೂರ್ಯಕೋಟಿಸಮಪ್ರಭ ।
ನಿರ್ವಿಘ್ನಂ ಕುರು ಮೇ ದೇವ ಶುಭಕಾರ್ಯೇಷು ಸರ್ವದಾ ॥ ೬ ॥
ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ
ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರುವೇ ನಮಃ ॥ ೭ ॥
ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ ।
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಂ ।
ಲಕ್ಷ್ಮೀಕಾಂತಂ ಕಮಲನಯನಂ ಯೋಗಿಭಿರ್ಧ್ಯಾನಗಮ್ಯಂ
ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಂ ॥ ೮ ॥
ಕರಚರಣಕೃತಂ ವಾಕ್ಕಾಯಜಂ ಕರ್ಮಜಂ ವಾ
ಶ್ರವಣನಯನಜಂ ವಾ ಮಾನಸಂ ವಾಽಪರಾಧಮ್ ।
ವಿಹಿತಮವಿಹಿತಂ ವಾ ಸರ್ವಮೇತತ್ ಕ್ಷಮಸ್ವ
ಜಯ ಜಯ ಕರುಣಾಬ್ಧೇ ಶ್ರೀ ಮಹಾದೇವ ಶಂಭೋ ॥ ೯ ॥
ನತ್ವಹಂ ಕಾಮಯೇ ರಾಜ್ಯಂ ನ ಸ್ವರ್ಗಂ ನಾಪುನರ್ಭವಂ ।
ಕಾಮಯೇ ದುಃಖತಪ್ತಾನಾಂ ಪ್ರಾಣಿನಾಮಾರ್ತಿನಾಶನಂ ॥ ೧೦ ॥
ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು ॥ ೧೧ ॥
ನಮಸ್ತೇ ಸತೇ ತೇ ಜಗತ್ಕಾರಣಾಯ
ನಮಸ್ತೇ ಚಿತೇ ಸರ್ವಲೋಕಾಶ್ರಯಾಯ ।
ನಮೋಽದ್ವೈತತತ್ತ್ವಾಯ ಮುಕ್ತಿಪ್ರದಾಯ ।
ನಮೋ ಬ್ರಹ್ಮಣೇ ವ್ಯಾಪಿನೇ ಶಾಶ್ವತಾಯ ॥ ೧೨ ॥
ತ್ವಮೇಕಂ ಶರಣ್ಯಂ ತ್ವಮೇಕಂ ವರೇಣ್ಯಂ
ತ್ವಮೇಕಂ ಜಗತ್ಪಾಲಕಂ ಸ್ವಪ್ರಕಾಶಂ ।
ತ್ವಮೇಕಂ ಜಗತ್‌ಕರ್ತೃ ಪಾತೃ ಪ್ರಹರ್ತೃ
ತ್ವಮೇಕಂ ಪರಂ ನಿಶ್ಚಲಂ ನಿರ್ವಿಕಲ್ಪಮ್ ॥ ೧೩ ॥
ಭಯಾನಾಂ ಭಯಂ ಭೀಷಣಂ ಭೀಷಣಾನಾಂ
ಗತಿಃ ಪ್ರಾಣಿನಾಂ ಪಾವನಂ ಪಾವನಾನಾಂ ।

ಮಹೋಚ್ಚೈಃ ಪದಾನಾಂ ನಿಯಂತೃ ತ್ವಮೇಕಂ ।
ಪರೇಷಾಂ ಪರಂ ರಕ್ಷಣಂ ರಕ್ಷಣಾನಾಮ್ ॥ ೧೪ ॥
ವಯಂ ತ್ವಾಂ ಸ್ಮರಾಮೋ ವಯಂ ತ್ವಾಂ ಭಜಾಮೋ
ವಯಂ ತ್ವಾಂ ಜಗತ್ಸಾಕ್ಷಿರೂಪಂ ನಮಾಮಃ ।
ಸದೈಕಂ ನಿಧಾನಂ ನಿರಾಲಂಬಮೀಶಮ್
ಭವಾಂಬೋಧಿಪೋತಂ ಶರಣ್ಯಂ ವ್ರಜಾಮಃ ॥ ೧೫ ॥
ವಿಪದೋ ನೈವ ವಿಪದಃ ಸಂಪದೋ ನೈವ ಸಂಪದಃ ।
ವಿಪದ್ವಿಸ್ಮರಣಂ ವಿಷ್ಣೋಃ ಸಂಪನ್ನಾರಾಯಣಸ್ಮೃತಿಃ ॥ ೧೬ ॥
ವಿಷ್ಣುರ್ವಾ ತ್ರಿಪುರಾಂತಕೋ ಭವತು ವಾ ಬ್ರಹ್ಮಾಸುರೇಂದ್ರೋಽಥವಾ
ಭಾನುರ್ವಾ ಶಶಲಕ್ಷಣೋಽಸ್ತು ಭಗವಾನ್ ಬುದ್ಧೋಽಥ ಸಿದ್ಧೋಽಥವಾ ।
ರಾಗದ್ವೇಷವಿಷಾರ್ತಿ ಮೋಹರಹಿತಃ ಸತ್ತ್ವಾನುಕಂಪೋದ್ಯತೋ
ಯಸ್ಸರ್ವೈಃ ಸಹ ಸಂಸ್ಕೃತೋ ಗುಣಗಣೈಃ ತಸ್ಮೈ ನಮಸ್ಸರ್ವದಾ॥೧೭॥
ಓಂ ನಮಃ ಪ್ರಣವಾರ್ಥಾಯ ಶುದ್ಧಜ್ಞಾನೈಕಮೂರ್ತಯೆ
ನಿರ್ಮಲಾಯ ಪ್ರಶಾಂತಾಯ ದಕ್ಷಿಣಾಮೂರ್ತಯೇ ನಮಃ ।
ನಿಧಯೇ ಸರ್ವವಿದ್ಯಾನಾಂ ಭಿಷಜೇ ಭವರೋಗಿಣಾಂ
ಗುರವೇ ಸರ್ವಲೋಕಾನಾಂ ದಕ್ಷಿಣಾಮೂರ್ತಯೇ ನಮಃ ॥ ೧೮ ॥
ಶಂಕರಂ ಶಂಕರಾಚಾರ್ಯಂ ಕೇಶವಂ ಬಾದರಾಯಣಂ ।
ಸೂತ್ರಭಾಷ್ಯಕೃತೌ ವಂದೇ ಭಗವಂತೌ ಪುನಃ ಪುನಃ ॥ ೧೯ ॥
ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥ ೨೦ ॥
ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಕೇ ।
ಶರಣ್ಯೇ ತ್ರ್ಯಂಬಕೇ ಗೌರೀ ನಾರಾಯಣಿ ನಮೋಽಸ್ತು ತೇ ॥ ೨೧ ॥
ಬ್ರಹ್ಮಾ ಮುರಾರಿಸ್ತ್ರಿಪುರಾಂತಕಾರೀ ಭಾನುಶ್ಶಶೀ ಭೂಮಿಸುತೋ ಬುದಶ್ಚ ।
ಗುರುಶ್ಚ ಶುಕ್ರಃ ಶನಿರಾಹುಕೇತವಃ ಕುರ್ವಂತು ಸರ್ವೇ ಮಮ ಸುಪ್ರಭಾತಂ ॥
ಪ್ರಹ್ಲಾದನಾರದಪರಾಶರಪುಂಡರೀಕ
ವ್ಯಾಸಾಂಬರೀಷಶುಕಶೌನಕಭೀಷ್ಮದಾಲ್ಭ್ಯಾನ್ ।
ರುಕ್ಮಾಂಗದಾರ್ಜುನವಶಿಷ್ಠ ವಿಭೀಷಣಾದೀನ್
ಪುಣ್ಯಾನಿಮಾನ್ ಪರಮಭಾಗವತಾನ್ ಸ್ಮರಾಮಿ ॥ ೨೩ ॥

ವಾಲ್ಮೀಕಿಃ ಸನಕಃ ಸನಂದನ ತರುವ್ಯಾ೯ಸೋ ವಶಿಷ್ಠೋ ಭೃಗುರ್
ಜಾಬಾಲಿರ್ಜಮದಗ್ನಿ ಕಚ್ಛ ಜನಕೋ ಗರ್ಗೋಽಂಗಿರಾ ಗೌತಮಃ ।
ಮಾಂಧಾತಾಋತುಪರ್ಣ ವೈನ್ಯಸಗರಾ ಧನ್ಯೋ ದಿಲೀಪೋ ನಲಃ
ಪುಣ್ಯೋ ಧರ್ಮಸುತೋ ಯಯಾತಿನಹುಷೌ ಕುರ್ವಂತು ನೋ
ಮಂಗಲಮ್ ॥ ೨೪ ।

ವ್ಯಾಸಂ ವಿಭೀಷಣಂ ಭೀಷ್ಮಂ ಯಮಂ ರಾಮಂ ದಮಂ ಬಲಿಮ್
ಸಪ್ತೈತಾನ್ ಸಂಸ್ಮರೇದ್ಯಸ್ತು ದುಃಸ್ವಪ್ನಸ್ತಸ್ಯ ನಶ್ಯತಿ ॥ ೨೫ ॥

ಪುಣ್ಯಶ್ಲೋಕೋ ನಲೋ ರಾಜಾ ಪುಣ್ಯಶ್ಲೋಕೋ ಯುಧಿಷ್ಠಿರಃ
ಪುಣ್ಯಶ್ಲೋಕಾ ಚ ವೈದೇಹೀ ಪುಣ್ಯಶ್ಲೋಕೋ ಜನಾರ್ದನಃ ॥ ೨೬ ।

ಕರ್ಕೋಟಕಸ್ಯ ನಾಗಸ್ಯ ದಮಯಂತ್ಯಾ ನಲಸ್ಯ ಚ ।
ಋತುಪರ್ಣಸ್ಯ ರಾಜರ್ಷೇಃ ಕೀರ್ತನಂ ಕಲಿನಾಶನಮ್ ॥ ೨೭ ॥
ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥ ೨೮ ॥

ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ ।
ಪಂಚಕಂ ನಾ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ॥ ೨೯ ॥

ಶ್ರೀದತ್ತಂ ನಾರದಂ ವ್ಯಾಸಂ ಶುಕಂ ಚ ಪವನಾತ್ಮಜಮ್ ।
ಕಾರ್ತವೀರ್ಯಂ ಚ ಗೋರಕ್ಷಂ ಸಪ್ತೈತೇ ಸ್ಮೃತಿಗಾಮಿನಃ ॥ ೩೦ ॥

## ದ್ವಾದಶ ಜ್ಯೋತಿರ್ಲಿಂಗಸ್ತವನ

ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಮ್
ಉಜ್ಜಯಿನ್ಯಾಂ ಮಹಾಕಾಲಂ ಓಂಕಾರಮಮಲೇಶ್ವರಮ್ ॥ ೧ ॥

ಪರಲ್ಯಾಂ ವೈಜನಾಥಂ ಚ ಡಾಕಿನ್ಯಾಂ ಭೀಮಶಂಕರಮ್
ಸೇತುಬಂಧೇ ತು ರಾಮೇಶಂ ನಾಗೇಶಂ ದಾರುಕಾವನೇ ॥ ೨ ॥

ವಾರಾಣಸ್ಯಾಂ ತು ವಿಶ್ವೇಶಂ ತ್ರ್ಯಂಬಕಂ ಗೌತಮೀತಟೇ
ಹಿಮಾಲಯೇ ತು ಕೇದಾರಂ ಘುಶ್ಮೇಶಂ ಚ ಶಿವಾಲಯೇ ॥ ೩ ॥

ಏತಾನಿ ಜ್ಯೋತಿರ್ಲಿಂಗಾನಿ ಸಾಯಂ ಪ್ರಾತಃ ಪಠೇನ್ನರಃ
ಸಪ್ತಜನ್ಮಕೃತಂ ಪಾಪಂ ಸ್ಮರಣೇನ ವಿನಶ್ಯತಿ ॥ ೪ ॥

## ಲಿಂಗಾಷ್ಟಕ

ಬ್ರಹ್ಮಮುರಾರಿ ಸುರಾರ್ಚಿತ ಲಿಂಗಂ ನಿರ್ಮಲ ಭಾಸಿತ ಶೋಭಿತ ಲಿಂಗಮ್
ಜನ್ಮಜದುಃಖ ವಿನಾಶಕ ಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥ ೧ ।
ದೇವಮುನಿಪ್ರವರಾರ್ಚಿತ ಲಿಂಗಂ ಕಾಮದಹಂ ಕರುಣಾಕರ ಲಿಂಗಮ್
ರಾವಣದರ್ಪವಿನಾಶನ ಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥ ೨ ।
ಸರ್ವಸುಗಂಧಿಸುಲೇಪಿತ ಲಿಂಗಂ ಬುದ್ಧಿವಿವರ್ಧನಕಾರಣ ಲಿಂಗಮ್
ಸಿದ್ಧ ಸುರಾಸುರ ವಂದಿತ ಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥ ೩ ।
ಕನಕಮಹಾಮಣಿ ಭೂಷಿತ ಲಿಂಗಂ ಫಣಿಪತಿವೇಷ್ಟಿತ ಶೋಭಿತ ಲಿಂಗಮ್
ದಕ್ಷ ಸುಯಜ್ಞ ವಿನಾಶನ ಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥ ೪ ।
ಕುಂಕುಮ ಚಂದನ ಲೇಪಿತ ಲಿಂಗಂ ಪಂಕಜಹಾರಸುಶೋಭಿತ ಲಿಂಗಮ್
ಸಂಚಿತ ಪಾಪವಿನಾಶನ ಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥ ೫ ।
ದೇವಗಣಾರ್ಚಿತ ಶೋಭಿತ ಲಿಂಗಂ ಭಾವೈರ್ಭಕ್ತಿಭಿರೇವ ಚ ಲಿಂಗಮ್
ದಿನಕರಕೋಟಿ ಪ್ರಭಾಕರ ಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥ ೬ ।
ಅಷ್ಟದಲೋಪರಿವೇಷ್ಟಿತ ಲಿಂಗಂ ಸರ್ವ ಸಮುದ್ಭವಕಾರಣ ಲಿಂಗಮ್
ಅಷ್ಟದರಿದ್ರ ವಿನಾಶನ ಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥ ೭ ।
ಸುರಗುರು ಸುರವರ ಪೂಜಿತ ಲಿಂಗಂ ಸುರವನ ಪುಷ್ಪಸದಾರ್ಚಿತ ಲಿಂಗಮ್
ಪರಾತ್ಪರಂ ಪರಮಾತ್ಮಕ ಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥ ೮ ।

ಲಿಂಗಾಷ್ಟಕಮಿದಂ ಪುಣ್ಯಂ ಯಃ ಪಠೇಚ್ಛಿವಸನ್ನಿಧೌ
ಶಿವಲೋಕಮವಾಪ್ನೋತಿ ಶಿವೇನ ಸಹ ಮೋದತೇ ॥ ೯ ॥

## ವಂದನ

ವಂದೇ ಶಂಭುಮುಮಾಪತಿಂ ಸುರಗುರುಂ ವಂದೇ ಜಗತ್ಕಾರಣಮ್
ವಂದೇ ಪನ್ನಗಭೂಷಣಂ ಮೃಗಧರಂ ವಂದೇ ಪಶೂನಾಂ ಪತಿಂ ।
ವಂದೇ ಸೂರ್ಯಶಶಾಂಕವಹ್ನಿನಯನಂ ವಂದೇ ಮುಕುಂದಪ್ರಿಯಂ ।
ವಂದೇ ಭಕ್ತಜನಾಶ್ರಯಂ ಚ ವರದಂ ವಂದೇ ಶಿವಂ ಶಂಕರಂ ॥

## ನಾರಾಯಣಸ್ತೋತ್ರ

ತಾಳ :— ದಾದರಾ

ನಾರಾಯಣ ನಾರಾಯಣ ಜಯ ಗೋವಿಂದ ಹರೇ ।
ನಾರಾಯಣ ನಾರಾಯಣ ಜಯ ಗೋಪಾಲ ಹರೇ ॥ ಪಲ್ಲ ॥

ಕರುಣಾಪಾರಾವಾರಾ ವರುಣಾಲಯ ಗಂಭೀರಾ ॥ ೧ ॥
ಘನನೀರದ ಸಂಕಾಶಾ ಕೃತ ಕಲಿ ಕಲ್ಮಷ ನಾಶಾ ॥ ೨ ॥
ಯಮುನಾತೀರ ವಿಹಾರಾ ಧೃತಕೌಸ್ತುಭಮಣಿ ಹಾರಾ ॥ ೩ ॥
ಪೀತಾಂಬರ ಪರಿಧಾನಾ ಸುರಕಲ್ಯಾಣ ನಿಧಾನಾ ॥ ೪ ॥
ಮಂಜುಲಗುಂಜಾಭೂಷಾ ಮಾಯಾಮಾನುಷವೇಷಾ ॥ ೫ ॥
ರಾಧಾಽಧರ ಮಧು ರಸಿಕಾ ರಜನೀಕರಕುಲತಿಲಕಾ ॥ ೬ ॥
ಮುರಲೀಗಾನವಿನೋದಾ ವೇದಸ್ತುತ ಭೂಪಾದಾ ॥ ೭ ॥
ಬರ್ಹಿನಿಬರ್ಹಾಪೀಡಾ ನಟನಾಟಕ ಫಣಿಕ್ರೀಡಾ ॥ ೮ ॥
ವಾರಿಜಭೂಷಾಭರಣಾ ರಾಜೀವ ರುಕ್ಮಿಣೀರಮಣಾ ॥ ೯ ॥
ಜಲರುಹದಲನಿಭನೇತ್ರಾ ಜಗದಾರಂಭಕಸೂತ್ರಾ ॥ ೧೦ ॥

## ವಂದನಾ

**ಗೋವಿಂದ ಗೋವಿಂದ ಹರೇ ಮುರಾರೇ ।**
**ಗೋವಿಂದ ಗೋವಿಂದ ರಥಾಂಗಪಾಣೇ ॥**
**ಗೋವಿಂದ ಗೋವಿಂದ ಮುಕುಂದ ಕೃಷ್ಣ ।**
**ಗೋವಿಂದ ಗೋವಿಂದ ನಮೋ ನಮಸ್ತೆ ॥**

## ಪದ

ರಾಗ :— ಬಿಭಾಸ ತಾಳ :— ಝುಂಪ

ಏಳಯ್ಯಾ ಗುರುವೆ ಬೆಳಗಾಯಿತು । ಏಳು ದತ್ತಾತ್ರಯನೆ । ಏಳು ಶ್ರೀಪಾದನೆ ಏಳು ಶ್ರೀವಲ್ಲಭನೆ ಭೋ ದೇವದೇವಾ ॥ ಪಲ್ಲ ॥

ಸುರನರರು ಮುನಿಯಕ್ಷಗಂಧರ್ವಕಿನ್ನರರು । ಗುರುಪದಾಂಬುಜದರು ಶನಕೆ ನಿಂತಿಹರು । ಗುರುಗಳೇ ಗುರುಗಳೇ ಪಾಲಿಪುದು ಎಮ್ಮನು । ಕರುಣ ಮಾಳ್ಪದು ದೇವ ಭಕ್ತಜನಕಾವಾ ॥ ೧ ॥

ಅರುಣೋದಯವಾಗಿ ಕತ್ತಲೆಯು ಪರಿದುದೋ । ಧರೆಯ ಪಾಲಿಸಲೇಳು ಅನಂತಶಕ್ತೇ । ಗುರುವೇ ಪ್ರಾತಃಕಾಲವಾಗುತ್ತ ಬಂದಿಹುದು । ನರಸಿಂಹ ಸರಸ್ವತಿಯೆ ಭರದಿಂದಲೇಳು ॥ ೨ ॥

ಕಾಕಡಾರತಿಗೆಂದು ಸಕಲರೂ ಬಂದಿಹರು । ಲೋಕಪಾಲಕ ಏಳು ವಿಶ್ವವ್ಯಾಪಿ । ಭೋ ಕರುಣಶಾಲಿಯೇ ಬ್ರಹ್ಮಾಂಡನಾಯಕನೆ । ನೀ ಕರುಣೆ ಮಾಳ್ಪುದೈ ತಂದೆ ಎಮಗೆ ॥ ೩ ॥

ಶೇಷಶಾಯೀ ಗುರು ಹೇ ಜಗಜ್ಜೀವನಾ। ಶ್ರೀಶುಕನಾರದರು ಸನಕ–ಶೌನಕರು। ವ್ಯಾಸಪ್ರಲ್ಹಾದರು ಭಕ್ತಜನಾರ್ದನಪಂತ। ಗುರುನಾಮ ಧಾರಕರು ಬಂದಿಹೆರು ಏಳು ॥ ೪ ॥

## ಧ್ಯಾನ

ದಿಗಂಬರಂ ಭಸ್ಮಸುಗಂಧಲೇಪನಂ ಚಕ್ರಂ ತ್ರಿಶೂಲಂ ಡಮರುಂ ಗದಾಂ ಚ । ಪದ್ಮಾಸನಸ್ಥಂ ರವಿಸೋಮನೇತ್ರಂ ದತ್ತಾತ್ರೇಯ ಧ್ಯಾನಮಭೀಷ್ಟಸಿದ್ಧಿದಂ ॥

ಆದೌ ಬ್ರಹ್ಮಾ ಮಧ್ಯೇ ವಿಷ್ಣುರಂತೇ ದೇವಃ ಸದಾಶಿವಃ ।
ಮೂರ್ತಿತ್ರಯಸ್ವರೂಪಾಯ ದತ್ತಾತ್ರೇಯ ನಮೋಽಸ್ತು ತೇ ॥

## ಶ್ರೀ ದತ್ತ ಪ್ರಾತಃಸ್ಮರಣ

ಪ್ರಾತಃ ಸ್ಮರಾಮಿ ಕರುಣಾವರುಣಾಲಯಂ ತಂ
ಶ್ರೀ ದತ್ತಮಾರ್ತವರದಂ ವರದಂಡಹಸ್ತಂ ।
ಸಂತಂ ನಿಜಾರ್ತಿಶಮನಂ ದಮನಂ ವಿನೀತಂ
ಸ್ವಾಂತರ್ಗತಾಖಿಲಮಲಂ ವಿಮಲಂ ಪ್ರಶಾಂತಂ ॥ ೧ ॥
ಪ್ರಾತರ್ಭಜಾಮಿ ಭಜದಿಷ್ಟವರಪ್ರದತ್ತಂ
ದತ್ತಪ್ರಸಾದಸದನಂ ವರಹೀರದತ್ತಂ ।
ಕಾಂತಂ ಮುದಾಽತ್ರಿತನಯಂ ಭವಮೋಕ್ಷಹೇತುಂ ।
ಸೇತುಂ ವೃಷಸ್ಯ ಪರಮಂ ಜಗದಾದಿಹೇತುಂ ॥ ೨ ॥
ಪ್ರಾತರ್ನಮಾಮಿ ಪ್ರಯತೋಽನಸೂಯಾ
ಪುತ್ರಂ ಸ್ವಮಿತ್ರಂ ಯಮಿತೋಽನಸೂಯಾಃ ।
ಭೂಯಾಂಸ ಆಪ್ತಾಸ್ತಮಿಹಾರ್ತಬಂಧುಂ
ಕಾರುಣ್ಯಸಿಂಧುಂ ಪ್ರಣಮಾಮಿ ಭಕ್ತ್ಯಾ ॥ ೩ ॥
ಲೋಕತ್ರಯಗುರೋರ್ಯಸ್ತು ಶ್ಲೋಕತ್ರಯಮಿದಂ ಪಠೇತ್
ಶ್ರೀದತ್ತಾತ್ರೇಯ ದೇವಸ್ಯ ತಸ್ಯ ಸಂಸಾರಭೀಃ ಕುತಃ ॥

ಅನಸೂಯಾತ್ರಿಸಂಭೂತೋ ದತ್ತಾತ್ರೇಯೋ ದಿಗಂಬರಃ ।
ಸ್ಮರ್ತೃಗಾಮಿ ಸ್ವಭಕ್ತಾನಾಮುದ್ಧರ್ತಾ ಭವಸಂಕಟಾತ್ ॥

## ಭಾಮಿನೀಷಟ್ಪದಿ

ಪಾಪವನು ಜಾಹ್ನವಿಯು ಕಳೆವಳು । ತಾಪವನು ಶಶಿ ದೈನ್ಯವನು ಮಣಿ ।
ಈ ಪರಿಯೊಳೊಂದೊಂದು ಗುಣವೊಂದೊಂದು ಸಾಧನಕೆ ॥
ಭಾಪು ನಿನ್ನಯ ದರುಶನವು ನಿಜ । ಪಾಪ ಹಾಂಕ ಪುಣ್ಯದಾಯಕ ।
ತಾಪಶಾಂತಕ ದರುಶನವ ಕೊಡು ದತ್ತ ಗುರುರಾಯಾ ॥ ೧ ॥
ಕಾಶಿ ಭಾಗೀರಥಿಯು ಪಾಪದ । ರಾಶಿಯನು ಸಂಹರಿಪಳೆನುತಲಿ ।
ಘೋಷಿಪವು ನಿಗಮಾಗಮಂಗಳು ಸ್ನಾನಮಾತ್ರದಲಿ ॥
ಈಸು ಪರಿಯಲಿ ಗಂಗೆ ಹೊತ್ತಿಹ । ದೋಷರಾಶಿಯನೆಲ್ಲವನು ನಿ ।
ರ್ದೋಷ ಮಾಳ್ಪುದು ನಿನ್ನ ದರುಶನ ದತ್ತಗುರುರಾಯಾ ॥ ೨ ॥
ಜಗವ ಸೃಷ್ಟಿಪ ಬ್ರಹ್ಮಮೂರ್ತಿಯು । ಜಗವ ರಕ್ಷಿಪ ವಿಷ್ಣುಮೂರ್ತಿಯು ।
ಜಗವ ಸಂಹರಿಸುವ ಮಹೇಶನ ಮೂರ್ತಿ ನೀನಾಗಿ ॥
ತ್ರಿಗುಣದಿಂ ವ್ಯಾಪಿಸುತ ವಿಶ್ವವ । ಭಗುತರಿಗೆ ಸುರಧೇನು ನಿನ್ನಯ ।
ಬಗೆಯ ಕಂಡವರಾರು ? ವಂದಿಪೆ ದತ್ತಗುರುರಾಯಾ ॥ ೩ ॥

## ಗುರುವಂದನಾ

ರಾಗ :— ತೋಡಿ ತಾಳ :— ಧುವಾಳಿ

ವಂದಿಪೆ ಗುರುಪಾದುಕಾ । ಭವಾಬ್ಧಿಯ ದಾಟಿಸುತಿಹ ನೌಕಾ ॥ ಪಲ್ಲ ॥
ವಿಶ್ವಂಭರಪಾದುಕಾ । ಜಗದ್ಗುರು ವಿಶ್ವವಂದ್ಯ ಪಾದುಕಾ ।
ಮೂರ್ತಿತ್ರಯ ಪಾದುಕಾ । ದೇವವರ ದತ್ತರಾಜ ಪಾದುಕಾ ॥
ಪಾಪ ಕಳೆವ ಕಾಯಕಾ । ವಿರುವ ಗುರು ಸಗುಣಮೂರ್ತಿ ಪಾದುಕಾ ।
ಚಿದ್ಘನ ಸುಖ ಪಾದುಕಾ । ಯತೀಶ್ವರ ಪದ್ಮನಾಭ ಪಾದುಕಾ ॥
ಭವಭಯಹರ ಪಾದುಕಾ । ನಮಿಪೆ ಗುರು ಶಿವಾನಂದ ಪಾದುಕಾ ।
ವಿರಾಟ್ಪುರುಷ ಪಾದುಕಾ । ಸಮಷ್ಟಿಯ ಪ್ರಣವರೂಪ ಪಾದುಕಾ ॥
ಪರಬ್ರಹ್ಮ ಪಾದುಕಾ । ಪರಾತ್ಪರ ತುರೀಯ ಗುರು ಪಾದುಕಾ ।
ಆತ್ಮರೂಪ ಪಾದುಕಾ । ಶಿವಾನಂದಾತ್ಮಜನುತ ಪಾದುಕಾ ॥

ಶ್ರೀದತ್ತಂ ವಂದೇ ಜಗದ್ಗುರುಂ

## ಸ್ತೋತ್ರ ಭಜನೆಯು

ತಾಳ :— ದಾದರಾ

ದತ್ತಾತ್ರಯ ದತ್ತಾತ್ರಯ ಜಯ ತ್ರೈಲೋಕ್ಯಗುರೋ ।
ದತ್ತಾತ್ರಯ ದತ್ತಾತ್ರಯ ಭಜಿಪರ ಕಲ್ಪತರೋ ॥ ಪಲ್ಲ ॥

ಬ್ರಹ್ಮಾನಂದ ಪರಾತ್ಪರ ಸಚ್ಚಿನ್ಮಯಮೂರ್ತಿ ।
ಬ್ರಹ್ಮಮಯಾ ವಿಶ್ವದಲ್ಲಿ ಹೊಳೆಯುವ ಪರಂಜ್ಯೋತಿ ॥ ೧ ॥

ನಿತ್ಯ ನಿರಾಮಯ ನಿರ್ಗುಣ ನಿಜಾನಂದಮಯನೇ ।
ಸತ್ಯಸನಾತನ ಸುಂದರ ಸಗುಣ ಸದಾಶಿವನೇ ॥ ೨ ॥

ಜಗದುದ್ಧಾರಕೆ ಜಗದೊಳು ಅವತರಿಸಿದ ಹರಿಯೇ ।
ಸೊಗಯಿಪ ಸನ್ಮುನಿಕುಮಾರ ದತ್ತಾತ್ರಯ ಗುರುವೇ ॥ ೩

ಕರುಣಾಪಾರಾವಾರಾ ಕಲಿಸಂಕಟಹರಣಾ ।
ಶರಣಾಗತ ಸಂಜೀವನ ಸುಖಶಾಂತಿಯ ಸದನಾ ॥ ೪ ॥

ವಾಸಿಪ ನಿತ್ಯ ನಿರಂತರ ಸುರನರ ವಂದಿತನೇ ।
ಕಾಷಾಯಾಂಬರ ದಂಡಕಮಂಡಲುಗಳ ಧರನೇ ॥ ೫ ॥

ವಾಡಿಯ ಕ್ಷೇತ್ರದಿ ವಾಸಿಸಿ ಬೇಡಿದ ಫಲ ಕೊಡುವ ।
ಕಾಡುವ ಭೂತಪಿಶಾಚಗಳೆಲ್ಲವನೋಡಿಸುವ ॥ ೬ ॥

ಚಿಂತನ ಮಾತ್ರದಿ ಸಂಚಿತ ಪಾಪವ ಕಳೆವವನೇ ।
ವಂಚನೆಯಿಲ್ಲದೆ ಭಜಕಗೆ ಸಂತಸ ನೀಡುವನೇ ॥ ೭ ॥

ಅನುದಿನ ನೆನೆಯುವ ಭಕ್ತರ ಆನಂದದ ನಿಧಿಯೇ ।
ಜನನ–ಮರಣದ ದುಃಖವ ಪರಿಹರಿಸುವ ಗುರುವೆ ॥ ೮ ॥

ಹರಿಹರಬ್ರಹ್ಮ ಸ್ವರೂಪದ ಚಿನ್ಮಯ ಮೂರುತಿಯೇ ।
ನರಹರಿ ರೂಪವ ತಾಳಿದ ಪರಮ ಸದ್ಗುರುವೇ ॥ ೯ ॥

ಭವಸಾಗರ ಭಯ ತೋರುವ ಭವದುಃಖದ ವೇಗಾ ।
ಭವಬಂಧನ ಭವಪಾಶವ ಬಿಡಿಸೈ ನೀ ಬೇಗಾ ॥ ೧೦ ॥

—ಲಿಂಗಾಭಟ್ಟ ಪೂಜಾರ, ಬಂಕಾಪೂರ

## ನಾಮ ಭಜನೆಯು

ಗುರುದತ್ತಾತ್ರಯಾ ಶ್ರೀಪಾದರಾಯಾ ।
ನರಸಿಂಹ ಸರಸ್ವತಿ ಯತಿರಾಯಾ ॥

## ನಾಮ ಮಹಿಮಾ

( ಭಾಮಿನಿ ಷಟ್ಪದಿ )

ದತ್ತನಾಮೋಚ್ಚರಣೆ ಭವಕ । ಗ್ಗತ್ತಲೆಗೆ ಸೂರ್ಯಪ್ರಕಾಶವು ।
ಸತ್ತ ಭೂತ ಪಿಶಾಚಗಣಕುಚ್ಚಾಟನೆಯ ಮಂತ್ರಾ ॥
ದತ್ತವೆಂಬೆರಡಕ್ಕರಂಗಳು । ಕತ್ತರಿಯು ಸಂಸಾರಪಾಶಕೆ ।
ಉತ್ತಮೋತ್ತಮ ವೃದ್ಧಿಬೀಜವು ದತ್ತನಾಮವಿದು ॥ ೧ ॥

—ಶ್ರೀ ದತ್ತಭಕ್ತ ಮಂಡಲ, ಕುಕನೂರು

## ಪದ

ರಾಗ :— ತೋಡಿ  ತಾಳ :— ತ್ರಿತಾಳ

ಗುರುಗುಣಗಾಯನವಾ । ಮಾಡುವಾ । ಮರಣಭಯವ ಪರಿ ।
ಹರಸಿ ಕಾಯುವಾ ॥ ಪಲ್ಲ ॥
ಗುಣದ ಗೌರವಾ । ಮನದ ಭಾವವಾ । ಎಣಿಸಿಯೆ ಕೂಡುವ ।
ಗುಣಿಜನ ಮಣಿಯಾ ॥ ೧ ॥
ಪತ್ತಿನ ಜನದಾ— । ಪತ್ತನು ನೀಗಿಸಿ । ಮತ್ತೆ ದಾರಿ ತೋ—
ರುತ್ತೆ ಸಲಹುವಾ ॥ ೨ ॥
ಭೃತ್ಯ ಭಕ್ತರಾ । ಮೃತ್ಯುವ ನಾಶಿಪ । ನಿತ್ಯಾಮರ
ಶ್ರೀ ದತ್ತಮೂರ್ತಿಯಾ ॥ ೩ ॥

—ಯೋಗೀಶ್ವರ ದತ್ತ ದೀಕ್ಷಿತರು, ಹುಬ್ಬಳ್ಳಿ

## ಶ್ರೀಪಾದ ಅಷ್ಟಕ

ಓಂ, ವೇದಾಂತ ವೇದ್ಯಂ ವರಯೋಗಿರೂಪಂ । ಜಗತ್ಪ್ರಕಾಶಂ ಸುರಲೋಕ ಪೂಜ್ಯಂ ॥ ಇಷ್ಟಾರ್ಥಸಿದ್ಧಿಂ ಕರುಣಾಕರೇಶಂ । ಶ್ರೀಪಾದರಾಜಂ ಶರಣಂ ಪ್ರಪದ್ಯೇ ॥ ೧ ॥

ಯೋಗೀಶರೂಪಂ ಪರಮಾತ್ಮವೇಷಂ । ಸದಾನುರಾಗಂ ಸಹಕಾರರೂಪಂ ।
ವರಪ್ರಸಾದಂ ವಿಬುಧೈಕಸೇವ್ಯಂ । ಶ್ರೀಪಾದರಾಜಂ.... ॥ ೨ ॥
ಕಾಷಾಯವಸ್ತ್ರಂ ಕರದಂಡಧಾರಿಣಂ ಕಮಂಡಲುಂ ಪದ್ಮಕರೇಣ ಶಂಖಂ ।
ಚಕ್ರಂ ಗದಾ ಭೂಷಿತಭೂಷಣಾಢ್ಯಂ । ಶ್ರೀಪಾದರಾಜಂ.... ॥ ೩ ॥
ಭೂಲೋಕಸಾರಂ ಭುವನೈಕನಾಥಂ ನಾಥಾಧಿನಾಥಂ ನರಲೋಕನಾಥಂ ।
ಕೃಷ್ಣಾವತಾರಂ ಕರುಣಾಕಟಾಕ್ಷಂ । ಶ್ರೀಪಾದರಾಜಂ.... ॥ ೪ ॥
ಲೋಕಾಭಿರಾಮಂ ಗುಣಭೂಷಣಾಢ್ಯಂ । ತೇಜೋಮುನಿಶ್ರೇಷ್ಠ ಮುನಿರ್ವರೇಣ್ಯಂ ।
ಸಮಸ್ತ ದುಃಖಾನಿ ಭಯಾನಿ ಯಾಂತಿ । ಶ್ರೀಪಾದರಾಜಂ.... ॥ ೫ ॥
ಕೃಷ್ಣಾವತೀರೆ ವಸತಿ ಪ್ರಸಿದ್ಧಂ । ಶ್ರೀಪಾದ ಶ್ರೀವಲ್ಲಭ ಯೋಗಮೂರ್ತಿಂ ।
ಸರ್ವೇಜನಾಶ್ಚಿಂತಿತಕಲ್ಪವೃಕ್ಷಂ । ಶ್ರೀಪಾದರಾಜಂ.... ॥ ೬ ॥
ಮಂತ್ರಾಧಿರಾಜಂ ಯತಿರಾಜಪೂಜ್ಯಂ । ತ್ರೈಲೋಕ್ಯನಾಥಂ ಜನಸೇವ್ಯನಾಥಂ ।
ಆನಂದಚಿತ್ತಂ ಅಖಿಲಾತ್ಮತೇಜಂ । ಶ್ರೀಪಾದರಾಜಂ.... ॥ ೭ ॥
ಮಂತ್ರಾನುಗಮ್ಯಂ ಮಹೋರ್ಮಿತೇಜಂ । ಮಹತ್ಪ್ರಕಾಶಂ ಮಹಾಶಾಂತಿ ಮೂರ್ತಿಂ ।
ತ್ರೈಲೋಕ್ಯಚಿತ್ತಂ ಅಖಿಲಾತ್ಮತೇಜಂ । ಶ್ರೀಪಾದರಾಜಂ ... ॥ ೮ ॥
ಶ್ರೀಪಾದಾಷ್ಟಕಮಿದಂ ಪುಣ್ಯಂ ಪ್ರಾತುರುತ್ಥಾಯ ಯಃ ಪಠೇತ್ ।
ಕೋಟಿಜನ್ಮಕೃತಂ ಪಾಪಂ ಸ್ಮರಣೇನ ವಿನಶ್ಯತಿ ॥ ೯ ॥

## ಪದ

ರಾಗ:—ಬಿಭಾಸ ತಾಳ:—ತ್ರಿತಾಳ

ಗುರುನಾಥನೇ । ಗುರುದೇವ ನೀನೇ ॥ ಪಲ್ಲ ॥
ಆರು ವೈರಿ ನಡುವೆ ಸೇರಿ ಬಳಲುತಿರುವೆ ।
ಪಾರುಗಾಣಲಾರೆ ತೋರೋ ದಾರಿಯನ್ನೇ ॥ ೧ ॥
ದುರಿತದಾವದಹನ ಪರಮಪ್ರೇಮ ಕರುಣ ।
ಭರಿತ ನಿನ್ನ ನಯನ ಕಿರಣ ಸುರಿಸೋ ಮುನ್ನ ॥ ೨ ॥
ಭಕ್ತ ಚಕ್ರಭಾನೋ ಅತ್ರಿ ಸ್ನೇಹಿಸೂನೋ ।
ವ್ಯರ್ಥಜನುಮವೇನೋ ಮುಕ್ತಿ ನೀಡೋ ನೀನು ॥ ೩ ॥

—ಹ. ರಾ. ದೇಸಾಯಿ, ಹಳೇಹುಬ್ಬಳ್ಳಿ

## ಕಾಕಡಾರತಿ ಪದ

ರಾಗ— ಭೂಪಾಳಿ ತಾಳ— ಕೇರವಾ

ಕಾಕಡಾರತಿ ಬೆಳಗುವೆ ಶ್ರೀಗುರು ಸಾರ್ವಭೌಮ ನಿನಗೆ ।
ಶ್ರೀಕರಶೋಭಿತ ಸುಂದರ ವಿಲಸಿತ ಚಿನುಮಯ ಗಾತ್ರನಿಗೆ ॥
ಪ್ರಭಾತ ಕಾಲದಿ ಪ್ರಶಾಂತಸಮಯದಿ ಪುಣ್ಯ ಮುಹೂರ್ತದಲಿ ।
ಪ್ರಭಾಕರನ್ಹೊಲುವ ಪ್ರಭಾವ ತೋರುವ ಪುರಾಣ ಪುರುಷನಿಗೆ ॥ ೧ ॥
ಆರತಿ ನಿನಗಿದೊ ಪ್ರೇಮಸುಧಾಮೃತ ತುಂಬಿದ ಹಣತಿಯಲಿ ।
ತೀರದ ವೃತ್ತಿಯ ಕುಡಿಯಲು ಕುಣಿಯುವ ನಂದದ ಜ್ಯೋತಿಯಲಿ ॥ ೨ ॥
ಎಂದಿಗು ಮುಗಿಯದ ಬಂದನವಿಲ್ಲದೆ ಚಿರಕಾಲದೊಳಿರುವಾ ।
ನಂದಮಯಾ ಪರಿಪೂರ್ಣವತಾರದಿ ಜಗವನು ತುಂಬಿರುವಾ ॥ ೩ ॥

—ಲಿಂಗಾಭಟ್ಟ ಪೂಜಾರ, ಬಂಕಾಪೂರ

## ಪದ ೨

ರಾಗ:— ಆಲಯ್ಯಾ ಬಿಲಾವಲ ತಾಳ:— ದೀಪಚಂದಿ

ಕಾಕಡಾರತಿ ಗುರುನಾಥಾ । ಗೈವೆ ।
ಅದ್ಭುತ ಮಹಿಮೆಯ ಸ್ವಾಮೀ ಸಮರ್ಥ ॥ ಪಲ್ಲ ॥
ಶ್ರೀಪಾದವಲ್ಲಭನಾಗಿ । ಮುಂದೆ । ನರಸಿಂಹ ಸರಸ್ವತಿ ನಾಮದ ತ್ಯಾಗೀ ।
ಕದಳೀವನದಿ ಗುಪ್ತನಾಗೀ । ನೀನೇ । ಸ್ವಾಮಿ ಸಮರ್ಥನಾಗಿಹೇ ದತ್ತಯೋಗಿ ॥ ೧ ॥
ಎನ್ನನು ನರನೆನ್ನಬೇಡಿ । ನಿಮ್ಮ । ಭಾವಕ್ಕೆ ತಕ್ಕ ಫಲಗಳನ್ನು ಬೇಡೀ ।
ಯೋಗಕ್ಷೇಮಕೆ ನನ್ನ ಕೂಡಿ । ರೆಂದು । ಸಾರಿದಿ ಭಕ್ತವತ್ಸಲ ದಯೆಮಾಡಿ ॥ ೨ ॥
ಎದೆಯೊಳು ಹೊಳೆಯುವ ಜ್ಯೋತಿ । ನಿನ್ನ । ನಿತ್ಯದ ಕಾಕಡಾರತಿ ಏಕಾವರ್ತಿ ।
ಬ್ರಹ್ಮಾಂಡವ್ಯಾಪಕಶಕ್ತಿ । ನೀನೇ । ಕರುಣಿಸು ಯೋಗೀಶನಾತ್ಮೈಕಭಕ್ತಿ ॥ ೩ ॥

## ದತ್ತನ ದಿನಚರಿ

ದತ್ತಗುರುವಿನ ದಿವ್ಯ ದಿನಚರಿಯ ಪೇಳುವೆನು ।
ಶ್ರದ್ಧೆಯಿಂ ಕೇಳಿದೊಡೆ ಪಾಪಲಯವಾಗುವದು ।

ಸ್ಮರ್ತೃಗಾಮಿಯು ದೇವ ನೆನಿಸಿದಾಗಲೆ ಬರುವ ।
ಸಂದೇಹ ಬೇಡಿದಕೆ ನಿಶ್ಚಯದಿ ನಂಬುವದು ॥

ಸಹ್ಯಾದ್ರಿ ಪರ್ವತದಿ ವಾಸವಂ ಮಾಡುವನು ।
ಮಾಹೂರ ಗಡದೊಳಗೆ ಪ್ರತಿದಿವಸ ಮಲಗುವನು ।
ಬೆಳಗು ಮುಂಜಾವಿನೊಳು ಬ್ರಾಹ್ಮ ಕಾಲದೊಳೆದ್ದು ।
ಪಾಪನಾಶಿನಿಯಾದ ಗಂಗೆಯೊಳು ಮೀಯುವನು ॥

ಗಂಗೆಯೊಳು ಸ್ನಾನವನು ಬಹುಸಾರೆ ಮಾಡುವನು ।
ಕೌರವರು ಪಾಂಡವರು ಎಲ್ಲಿ ಬಡಿದಾಡಿದರೊ ।
ಎಲ್ಲಿ ಭಗವಾನ್ ಕೃಷ್ಣ ಸಾರಥ್ಯ ಮಾಡಿದನೊ ।
ಆ ಕುರುಕ್ಷೇತ್ರದೊಳು ಆಚಮನ ಮಾಡುವನು ॥

ಪುಣ್ಯತಮ ಸ್ಥಾನದೊಳು ಮುಂಬಯಿ ಸಮೀಪದೊಳು ।
ಭಸ್ಮವನು ಧರಿಸುವನು ಧೂತಪಾಪೇಶ್ವರದಿ ।
ಪರಮಪಾವನೆಯಾದ ಕೃಷ್ಣವೇಣಿಯ ದಡದಿ ।
ಸಂಧ್ಯೆಯಂ ಗೈಯುವನು ಕರಹಾಡ ಗ್ರಾಮದೊಳು ॥

ಪುಂಡಲೀಕನು ಗೈದ ಪಿತರ ಸೇವೆಗೆ ಮೆಚ್ಚಿ ।
ಪಾಂಡುರಂಗನು ಎಲ್ಲಿ ಇಟ್ಟಿಗೆಯನೇರಿದನೊ ।
ನಾಮಗರ್ಜನೆಯ ಆ ಪಂಢರಿಯ ಪುರದೊಳಗೆ ।
ಬಹುಪರಿಯ ಸೌಂಗಧ ವಸ್ತುಗಳ ಧರಿಸುವನು ॥

ಭಾವಿಕರ ತವರುಮನೆಯೆಂದು ಹೆಸರಾಗಿರುವ ।
ಎಂದೆಂದಿಗೂ ಸವೆಯದಂತಿರುವ ಅಚ್ಚರಿಯ ।
ಶುದ್ಧ ಭಸ್ಮದ ಗುಡ್ಡದಿಂದ ಶೋಭಿಸುತಿರುವ ।
ಗಾಣಗಾಪುರದೊಳಗೆ ನಡಿಸುವನು ಧ್ಯಾನವನು ॥

ತನ್ನ ಭಕ್ತರ ಕಾಯಲೆಂದು ಲಕ್ಷ್ಮೀದೇವಿ ।
ಕೊಲ್ಹಾಸುರನಂ ಕೊಂದು ಎಲ್ಲಿ ತಳವೂರಿದಳೊ ।
ಕರವೀರಪುರವೆಂದು ಯಾವುದನು ಕರೆಯುವರೊ ।
ಅಲ್ಲಿ ಕೊಲ್ಹಾಪುರದಿ ಮಧುಕರಿಯ ಬೇಡುವನು ॥

ನಿತ್ಯತೃಪ್ತನು ದೇವ ಊಟವೇತಕೆ ಬೇಕು ।
ಮಾನವರನನುಕರಿಸಿ ವರ್ತನೆಯ ತೋರುವನು ।

ಸಾರಾಪುರವೆಂಬಲ್ಲಿ ಭೋಜನವ ಮಾಡುವನು ।
ವಿಶ್ರಾಂತಿ ಪಡೆಯುವನು ಮಾಹೂರದಲಿ ಸ್ವಲ್ಪ ॥
ಭಕ್ತ ಕಾರ್ಯಕ್ಕಾಗಿ ಸಂಚಾರವಾಮೇಲೆ ।
ಸಂಜೆಯಲಿ ಹೊರಡುವನು ಪಶ್ಚಿಮದ ಸಾಗರಕೆ ।
ಗಣಪತಿಯು ಸ್ಥಾಪಿಸಿದ ಮಹಾಬಲೇಶ್ವರನೆಡೆಗೆ ।
ಗೋಕರ್ಣ ಕ್ಷೇತ್ರಕ್ಕೆ ಸಂಧ್ಯೆ ಮಾಡುವದಕ್ಕೆ ॥
ನಡುನಡುವೆ ಅಲ್ಲಲ್ಲಿ ಭಕ್ತರಿಚ್ಛಿಸಿದಂತೆ ।
ಬೇಕಾದ ಕಡೆಯಲ್ಲಿ ಬೇಕಾದ ವೇಳೆಯಲಿ ।
ತತ್ಕಾಲ ಹೋಗುವನು ಭಾವಿಕರ ಪೊರೆಯುವನು !
ಭಕ್ತವತ್ಸಲನೀತ ಕರೆದೊಡನೆ ಬರುತಿಹನು ॥
ಈ ರೀತಿ ವ್ಯಾಪಕನು ಸಂಚಾರ ಮಾಡುವನು ।
ಏನಿದಚ್ಚರಿಯೆಂದು ಬಟ್ಟು ಕಚ್ಚಲು ಬೇಡಿ ।
ಮಾಯೆಯೊಡೆಯಗೆ ಕಠಿಣ ಮಾತೆಂಬುದಿರಬಹುದೆ ।
ನಂಬಿ ಭಜಿಸುತ ನೋಡಿ ಅವನ ಕಾರುಣ್ಯವನು ॥
ಅವನನ್ನು ಅರಿಯದಲೆ ನಂಬಿಗೆಯ ತೋರದಲೆ ।
ಕಷ್ಟಪಡುವರು ಜನರು ದಯವು ಬರುವದು ನೋಡಿ ।
ಇನ್ನಾದರೂ ಬೇಗ ಕಣ್ತೆರೆದು ಪರಿಕಿಸಲಿ
ನಾನಾವ ಬಿನ್ನಹದಿ ಅವನನ್ನು ಪೂಜಿಸಲಿ ॥

ಪ್ರೊ. ಎನ್. ಆರ್. ಕುಲಕರ್ಣಿ, ಧಾರವಾಡ.

---

## ಪ್ರಾರ್ಥನಾ

ತ್ರೈಲೋಕ್ಯಚೈತನ್ಯಮಯಾಧಿದೇವ ।
ಶ್ರೀ ದತ್ತ ಶಂಭೋ ಭವದಾಜ್ಞಯೈವ ॥
ಪ್ರಾತಃಸಮುತ್ಥಾಯ ತವ ಪ್ರಿಯಾರ್ಥಂ ।
ಸಂಸಾರಯಾತ್ರಾಮನುವರ್ತಯಿಷ್ಯೇ ॥
ಜಾನಾಮಿ ಧರ್ಮಂ ನ ಚ ಮೆ ಪ್ರವೃತ್ತಿಃ ।
ಜಾನಾಮ್ಯಧರ್ಮಂ ನ ಚ ಮೆ ನಿವೃತ್ತಿಃ ॥
ತ್ವಯಾಧಿದೇವೇನ ಹೃದಿ ಸ್ಥಿತೇನ ।
ಯಥಾನಿಯುಕ್ತೋಽಸ್ಮಿ ತಥಾ ಕರೋಮಿ ॥

ಸ್ಥಿತಿಃ ಸೇವಾ ಗತಿರ್ಯಾತ್ರಾ ಸ್ಮೃತಿಶ್ಚಿಂತಾಸ್ತುತಿರ್ವಚಃ ।
ಸರ್ವದಾ ಭಗವಾನ್ ದತ್ತ ಮದೀಯಾರಾಧನಂ ತವ ॥
ಶ್ರೀದತ್ತ ದೇವೇಶ್ವರ ಮೇ ಪ್ರಸೀದ ।
ಶ್ರೀದತ್ತ ಸರ್ವೇಶ್ವರ ಮೇ ಪ್ರಸೀದ ॥
ಪ್ರಸೀದ ಯೋಗೇಶ್ವರ ದೇಹಿ ಯೋಗಂ ।
ತ್ವದೀಯ ಭಕ್ತೇಃ ಕುರು ಮಾ ವಿಯೋಗಂ ॥
ಸುಂದರ ಚರಣಕೆ ಮಾಡುವೆ ವಂದನೆ ।
ನೇತ್ರದಿ ನೋಡುವೆ ನಿನ್ನ ರೂಪವನು ॥
ಪ್ರೇಮದಿ ಪೂಜಿಪೆ ಭಾವದಿ ಎರಗುವೆ ।
ನಲಿಯುತ ಪಾಡುವೆ ನಿನ್ನ ನಾಮಗಳ ॥
ಬ್ರಹ್ಮಾಮಹೇಶಾಚ್ಯುತರೂಪದತ್ತಾ । ತ್ರಿಮೂರ್ತಿ ನಿನ್ನಿಷ್ಟವೇ ಸರ್ವಸತ್ತಾ ॥
ದಾಸರ್ಗೆ ಸರ್ವಾರ್ಥವನೀವ ದಕ್ಷಾ । ನಿನ್ನಲ್ಲಿ ಒಟ್ಟಾಗಿವೆ ಭೋಗಮೋಕ್ಷಾ ॥
ಸದಾಸರ್ವದಾ ಆಗಲ್ಕೆ ನಿನ್ನ ಯೋಗಾ ।
ತನೂ ಆಗಲ್ಕೆ ನಿನ್ನ ಕಾರ್ಯೋಪಯೋಗಾ ॥
ಉಪೇಕ್ಷಿಸಲು ಬೇಡ್ಕೆ ಸುಗುಣವಂತಾ ಶ್ರೀದತ್ತಾ ।
ಸದ್ಗುರುನಾಥಾ ಬೇಡಲಿನ್ನೇನು ಮತ್ತಾ ॥
ಉಪಾಸನೆಗೆ ದೃಢಭಾವ ಬೇಕು । ಭೂದೇವಸಂತರಿಗೆ ವಂದಿಸಲು ಬೇಕು ॥
ಸತ್ಕರ್ಮದಲ್ಲಿಯೇ ದಿನಗಳೆಯಬೇಕು । ಯಾವಾಗಲೂ ಮಂಗಲವಾಡಬೇಕು ॥
ಎಲ್ಲೆಲ್ಲಿ ಹರಿದಾಡುವದೆನ್ನ ಮನವು । ಅಲ್ಲೆಲ್ಲ ಶ್ರೀಗುರುವೆ ನಿಜ ನಿನ್ನ ತನುವು ॥
ಎಲ್ಲೆಲ್ಲಿ ಮಸ್ತಕನಿಡುವೆ ವಂದಿಸಲು । ಅಲ್ಲೆಲ್ಲ ಸದ್ಗುರು ನಿನ್ನ
ಶ್ರೀಪಾದ ಯುಗಲು ॥

**ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ ರಾಜಾಧಿರಾಜ**
**ಸದ್ಗುರು ದತ್ತರಾಜ ಮಹಾರಾಜಕೀ ಜೈ**
**ಅವಧೂತ ಚಿಂತನ ಶ್ರೀಗುರುದೇವದತ್ತ**

---

## ಶ್ರೀ ದತ್ತ ಮಾನಸಪೂಜಾ

ದತ್ತಾತ್ರೇಯಾಹ್ವಯಾಮ್ಯತ್ರ ಪರಿವಾರೈಃ ಸಹಾರ್ಚನೆ ।
ಶ್ರದ್ಧಾಭಕ್ತ್ಯೇಶ್ವರಾಗಚ್ಛ ಧ್ಯಾತಧಾಮ್ನಾಂ ಜಸಾಂ ವಿಭೋ ॥ ೧ ॥

ಸೌವರ್ಣಂ ರತ್ನಜಡಿತಂ ಕಲ್ಪಿತಂ ದೇವತಾಮಯಂ ।
ರಮ್ಯಂ ಸಿಂಹಾಸನಂ ದತ್ತ ತತ್ರೋಪವಿಶಯಂತ್ರಿತೇ ॥ ೨ ॥
ಪಾದ್ಯಂ ಚಂದನಕರ್ಪೂರಸುರಭಿಃ ಸ್ವಾದು ವಾರಿ ತೇ ।
ಗೃಹಾಣ ಕಲ್ಪಿತಂ ತೇನ ದತ್ತಾಂಘ್ರೀ ಕ್ಷಾಲಯಾಮಿ ತೇ ॥ ೩ ॥
ಗಂಧಾಬ್ಜತುಲಸೀಬಿಲ್ವಶಮೀಪತ್ರಾಕ್ಷತಾನ್ವಿತಂ ।
ನಾಂಬಾರ್ಘ್ಯಂ ಸ್ವರ್ಣಪಾತ್ರೇಣ ಕಲ್ಪಿತಂ ದತ್ತ ಗೃಹ್ಯತಾಂ ॥ ೪ ॥
ಸುಸ್ವಾದಾಚಮನೀಯಾಂಬು ಹೈಮಪಾತ್ರೇಣ ಕಲ್ಪಿತಂ ।
ತುಭ್ಯಮಾಚಮ್ಯತಾಂ ದತ್ತ ಮಧುಪರ್ಕಂ ಗೃಹಾಣ ಭೋ ॥ ೫ ॥
ಪುಷ್ಪವಾಸಿತಸತ್ತೈಲಮಂಗೇಷ್ವಾಲಿಪ್ಯ ದತ್ತ ಭೋ ।
ಪಂಚಾಮೃತೈಶ್ಚ ಗಂಗಾಬ್ಧಿಃ ಸ್ನಾನಂ ತೇ ಕಲ್ಪಯಾಮ್ಯಹಮ್ ॥ ೬ ॥
ಭಕ್ತ್ಯಾ ದಿಗಂಬರಾಚಾಂತ ಜಲೇದಂ ದತ್ತ ಕಲ್ಪಿತಂ ।
ಕಾಷಾಯಪರಿಧಾನಂ ತದ್ಗೃಹಾಣೈಣೇಯ ಚರ್ಮ ಚ ॥ ೭ ॥
ನಾನಾಸೂತ್ರಧರ್ಯೈತೇ ತೇ ಬ್ರಹ್ಮಸೂತ್ರೇ ಪ್ರಕಲ್ಪಿತೇ ।
ಗೃಹಾಣ ದೈವತಮಯೇ ಶ್ರೀದತ್ತ ನವತಂತುಕೇ ॥ ೮ ॥
ಭೂಮಿವ್ಯತ್ಸ್ನಾಸು ಕಸ್ತೂರಿ ಕೇಶರಾನ್ವಿತ ಚಂದನಂ ।
ರತ್ನಾಕ್ಷತಾಃ ಕಲ್ಪಿತಾಸ್ತ್ವಾಮಲಂ ಕುರ್ವೇಥ ದತ್ತ ತೈಃ ॥ ೯ ॥
ಸಚ್ಛಮೀ ಬಿಲ್ವ ತುಲಸೀ ಪತ್ರೈಃ ಸೌಗಂಧಿಕೈಃ ಸುಮೈಃ ।
ಮನಸಾ ಕಲ್ಪಿತೈರ್ನಾನಾ ವಿಧೈರ್ದತ್ತಾರ್ಚಯಾಮ್ಯಹಂ ॥ ೧೦ ॥
ಲಾಕ್ಷಾಸಿತಾಭ್ರ ಶ್ರೀವಾಸ ಶ್ರೀಖಂಡಾಗುರುಗುಗ್ಗುಲೈಃ ।
ಯುಕ್ತೋಽಗ್ನಿ ಯೋಜಿತೋ ಧೂಪೋ ಹೃದಾ ಸ್ವೀಕುರು ದತ್ತ ತಮ್ ॥೧೧॥
ಸ್ವರ್ಣಪಾತ್ರೇ ಗೋಘೃತಾಕ್ತವರ್ತಿ ಪ್ರಜ್ವಾಲಿತಂ ಹೃದಾ ।
ದೀಪಂ ದತ್ತ ಸಕರ್ಪೂರಂ ಗೃಹಾಣ ಸ್ವಂ ಪ್ರಕಾಶಯ ॥ ೧೨ ॥
ಸಷಡ್ರಸಂ ಷಡ್ವಿಧಾನ್ನಂ ನೈವೇದ್ಯಂ ಗವ್ಯಸಂಯುತಂ ।
ಕಲ್ಪಿತಂ ಹೈಮಪಾತ್ರೇ ತೇ ಭುಂಕ್ಷ್ವ ದತ್ತಾಂಬ್ವದತಃ ಪಿಬ ॥ ೧೩ ॥
ಪ್ರಕ್ಷಾಲ್ಯಾಸ್ಯಂ ಕರೌಚಾದ್ಭಿರ್ದತ್ತಾಚಮ್ಯ ಪ್ರಗೃಹ್ಯತಾಂ ।
ತಾಂಬೂಲಂ ದಕ್ಷಿಣಾಂ ಹೈಮೀಂ ಕಲ್ಪಿತಾನಿ ಫಲಾನಿ ಚ ॥ ೧೪ ॥
ನೀರಾಜ್ಯರತ್ನದೀಪೈಸ್ತ್ವಾಂ ಪ್ರಣಮ್ಯ ಮನಸಾ ಚ-ತೇ ।
ಪರಿತಸ್ತ್ವತ್ಕಥೋದ್ಘಾತೈಃ ಕುರ್ವೇ ದತ್ತ ಪ್ರದಕ್ಷಿಣಾಃ ॥ ೧೫ ॥

ಮಂತ್ರವನ್ನಿಹಿತೋ ಮೂರ್ಧ್ನಿ ದತ್ತ ತೇ ಕುಸುಮಾಂಜಲಿಃ ।
ಕಲ್ಪ್ಯತೆ ಮನಸಾ ಗೀತವಾದ್ಯನೃತ್ಯೋಪಚಾರಕಾಃ ೧೬ ॥
ಪ್ರೇರ್ಯಮಾಣ ಪ್ರೇರಕೇಣ ತ್ವಯಾದತ್ತೇ ರಿತೇನತೆ ॥
ಕೃತೇಯಂ ಮನಸಾ ಪೂಜಾ ಶ್ರೀಮಾಂಸ್ತುಷ್ಟೋ ಭವಾನಯಾ ॥ ೧೭ ॥

ಇತಿ ಮಾನಸ ಪೂಜಾ ಸಮಾಪ್ತ.

## ಶ್ರೀದತ್ತಾತ್ರೇಯ ಅಷ್ಟೋತ್ತರಶತ ನಾಮಸ್ತೋತ್ರಂ

ಅಸ್ಯ ಶ್ರೀದತ್ತಾತ್ರೆಯ ಅಷ್ಟೋತ್ತರಶತ ನಾಮಸ್ತೋತ್ರ ಮಂತ್ರಸ್ಯ ॥ ಬ್ರಹ್ಮಾವಿಷ್ಣುಮಹೇಶ್ವರಾ ಋಷಯಃ ॥ ಶ್ರೀದತ್ತಾತ್ರೆಯೋ ದೇವತಾ ॥ ಅನುಷ್ಟುಪ್ ಛಂದಃ ॥ ಶ್ರೀದತ್ತಾತ್ರೇಯಪ್ರೀತ್ಯರ್ಥೆ ಜಪೆ ವಿನಿಯೋಗಃ ॥ ಅಥ ಧ್ಯಾನಂ ॥

ದಿಗಂಬರಂ ಭಸ್ಮಸುಗಂಧಲೇಪನಂ । ಚಕ್ರಂ ತ್ರಿಶೂಲಂ ಡಮರುಂ ಗದಾಂ ಚ ॥ ಪದ್ಮಾಸನಸ್ಥಂ ರವಿಸೋಮನೇತ್ರಂ । ದತ್ತಾತ್ರೆಯಧ್ಯಾನಮಭೀಷ್ಟಸಿದ್ಧಿದಂ ॥ ಅನಸೂಯಾಸುತೋದತ್ತೋ ಅತ್ರಿಪುತ್ರೊ ಮಹಾಮುನಿಃ । ಯೋಗೀಂದ್ರಃ ಪುಣ್ಯಪುರುಷೊ ದೇವೇಶೋ ಜಗದೀಶ್ವರಃ ॥ ೧ ॥ ಪರಮಾತ್ಮಾ ಪರಬ್ರಹ್ಮ ಸದಾನಂದೋ ಜಗದ್ಗುರುಃ । ನಿತ್ಯತೃಪ್ತೊ ನಿರಾಕಾರೊ ನಿರ್ವಿಕಾರೊ ನಿರಂಜನಃ ॥ ೨ ॥ ಗುಣಾತ್ಮಕೊ ಗುಣಾತೀತೋ ಬ್ರಹ್ಮಾವಿಷ್ಣುಶಿವಾತ್ಮಕಃ । ನಾನಾರೂಪಧರೊ ನಿತ್ಯಃ ಶಾಂತೋದಾಂತಃ ಕೃಪಾನಿಧಿಃ ॥ ೩ ॥ ಭಕ್ತಪ್ರಿಯೊ ಭಯಹರೊ ಭಗವಾನ್ ಭವನಾಶನಃ । ಆದಿದೇವೊ ಮಹಾದೇವೊ ದೇವೇಶೊ ಭುವನೇಶ್ವರಃ ॥ ೪ ॥ ವೇದಾಂತವೇದ್ಯೊ ವರದೊ ವಿಶ್ವರೂಪೋ ವ್ಯಯೋ ಹರಿಃ । ಸಚ್ಚಿದಾನಂದಸರ್ವೇಶೊ ಯೋಗೀಶೊ ಭಕ್ತವತ್ಸಲಃ ॥ ೫ ॥ ದಿಗಂಬರೊ ದಿವ್ಯಮೂರ್ತಿರ್ದಿವ್ಯಭೂತಿವಿಭೂಷಣಃ ॥ ಅನಾದಿಸಿದ್ಧಸುಲಭೊ ಭಕ್ತವಾಂಛಿತದಾಯಕಃ ॥ ೬ ॥ ಭುಕ್ತಿಮುಕ್ತಿಪ್ರದಾತಾ ಚ ಕಾರ್ತವೀರ್ಯವರಪ್ರದಃ ॥ ಏಕೊ ನೈಕೊ ಸದ್ವಿತಿಯೋ ನಿಗಮಾಗಮವಂದಿತಃ ॥ ೭ ॥ ಸಾತ್ವತಾನಾಂ ಮಹಾತ್ಮಾ ಚ ವಿಶ್ವಾತ್ಮಾ ವಿಶ್ವತೋಮುಖಃ । ಸರ್ವೇಶ್ವರಃ ಸದಾ ತುಷ್ಟೊ ಸರ್ವಮಂಗಲದಾಯಕಃ ॥ ೮ ॥ ನಿಷ್ಕಲಂಕೊ ನಿರಾಭಾಸೊ ನಿರ್ವಿಕಲ್ಪೊ ನಿರಾಶ್ರಯಃ । ಪುರುಷೋತ್ತಮೊ ಲೋಕನಾಥೋ ಪುರಾಣಪುರುಷೋತ್ತಮಃ ॥ ೯ ॥

ಅಪಾರಮಹಿಮಾನಂತ ಆದ್ಯಂತರಹಿತಃ ಶಿವಃ ॥ ಸಂಸಾರಭಯದಾವಾಗ್ನಿ ರ್ಭವಸಾಗರತಾರಕಃ ॥ ೧೦ ॥ ಶ್ರೀನಿವಾಸೊ ವಿಶಾಲಾಕ್ಷೊ ಕ್ಷೀರಾಬ್ಧಿ ಶಯನೊ ಚ್ಯುತಃ ॥ ಸರ್ವಪಾಪಕ್ಷಯಕರಸ್ತಾಪತ್ರಯನಿವಾರಣಃ ॥ ೧೧ ॥ ಲೋಕೇಶಃ ಸರ್ವಭೂತೇಶೊ ವ್ಯಾಪಕಃ ಕರುಣಾಕರಃ ॥ ಬ್ರಹ್ಮಾದಿವಂದಿತ ಪದೊ ಮುನಿವಂದ್ಯಃ ಸ್ತುತಿಪ್ರಿಯಃ ॥ ೧೨ ॥ ನಾರೂಪಕ್ರಿಯಾತೀತೊ ನಿಃಸ್ಪೃಹೊ ನಿರ್ಮಲಾತ್ಮಕಃ । ಮಾಯಾಧೀಶೊ ಮಹಾತ್ಮಾ ಚ ಮಹಾದೇವೊ ಮಹೇಶ್ವರಃ ॥೧೩॥ ವ್ಯಾಘ್ರಚರ್ಮಾಂಬರಧರೊ ನಾನಾಗಕುಂಡಲಭೂಷಣಃ॥ ಸರ್ವಲಕ್ಷಣಸಂಪನ್ನೊ ಸರ್ವಸಿದ್ಧಿಪ್ರದಾಯಕಃ ॥ ೧೪ ॥ ಸರ್ವಜ್ಞಃ ಕರುಣಾಸಿಂಧುಃ ಸರ್ಪಹಾರಃ ಸದಾಶಿವಃ । ಸಹ್ಯಾದ್ರಿವಾಸಃ ಸರ್ವಾತ್ಮಾ ಭವಬಂಧ ವಿಮೋಚನಃ ॥ ೧೫ ॥ ವಿಶ್ವಂಭರೊ ವಿಶ್ವನಾಥೋ ಜಗನ್ನಾಥೊ ಜಗತ್ಪ್ರಭುಃ । ಅಷ್ಟೋತ್ತರಶತಂ ನಾಮ್ನಾಂ ದತ್ತಾತ್ರೇಯಮಹಾಮುನೇಃ ॥೧೬॥ ನಿತ್ಯಂ ಪಠತಿ ಯೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೆ । ಸರ್ವದುಃಖ ಪ್ರಶಮನಂ ಸರ್ವಾರಿಷ್ಟನಿವಾರಣಂ ॥ ೧೭ ॥ ಭೋಗಮೋಕ್ಷಪ್ರದಂ ನೃಣಾಂ ದತ್ತಸಾಯುಜ್ಯಮಾಪ್ನುಯಾತ್ ॥ ಪಠಂತಿ ಯೇ ಪ್ರಯತ್ನೇನ ಸತ್ಯಂ ಸತ್ಯಂ ವದಾಮ್ಯಹಂ ॥ ೧೮ ॥

ಇತಿ ಶ್ರೀ ಬ್ರಹ್ಮಾಂಡ ಪುರಾಣೆ ಬ್ರಹ್ಮನಾರದ ಸಂವಾದೆ ದತ್ತಾತ್ರೇಯ ಅಷ್ಟೋತ್ತರ ಶತನಾಮ ಸ್ತೋತ್ರಂ ಸಂಪೂರ್ಣಂ

## ಶ್ರೀದತ್ತಾತ್ರೇಯ ಸ್ತೋತ್ರಮ್

ಶ್ರೀಗಣೇಶಾಯನಮಃ ॥ ಜಟಾಧರಂ ಪಾಂಡುರಂಗಂ ಶೂಲಹಸ್ತಂ ಕೃಪಾನಿಧಿಂ । ಸರ್ವರೋಗಹರಂ ದೇವಂ ದತ್ತಾತ್ರೇಯಮಹಂ ಭಜೆ ॥ ೧ ॥

ಅಸ್ಯ ಶ್ರೀದತ್ತಾತ್ರೇಯಸ್ತೋತ್ರಸ್ಯ ಭಗವನ್ನಾರದಋುಷಿಃ । ಅನುಷ್ಟುಪ್‌ಛಂದಃ । ಶ್ರೀದತ್ತಃ ಪರಮಾತ್ಮಾ ದೇವತಾ । ಶ್ರೀದತ್ತ ಪ್ರೀತ್ಯರ್ಥೇ ಜಪೇ ವಿನಿಯೋಗಃ ॥

ಜಗದುತ್ಪತ್ತಿಕರ್ತ್ರೇ ಚ ಸ್ಥಿತಿಸಂಹಾರಹೇತವೆ । ಭವಪಾಶವಿಮುಕ್ತಾಯ ದತ್ತಾತ್ರೇಯ ನಮೋಽಸ್ತುತೆ ॥ ೧ ॥ ಜರಾಜನ್ಮವಿನಾಶಾಯ ದೇಹಶುದ್ಧಿಕರಾಯ ಚ । ದಿಗಂಬರ ದಯಾಮೂರ್ತೆ ದತ್ತಾತ್ರೇಯ ನಮೋಽಸ್ತುತೆ ॥೨॥ ಕರ್ಪೂರ

ಕಾಂತಿ ದೇಹಾಯ ಬ್ರಹ್ಮಮೂರ್ತಿಧರಾಯ ಚ । ವೇದಶಾಸ್ತ್ರಪರಿಜ್ಞಾಯ ದತ್ತಾತ್ರೇಯ ನಮೋಽಸ್ತುತೆ ॥೩॥ ಹ್ರಸ್ವದೀರ್ಘಕೃಶಸ್ಥೂಲ ನಾಮಗೋತ್ರವಿವರ್ಜಿತ । ಪಂಚಭೂತಪ್ರದೀಪ್ತಾಯ ದತ್ತಾತ್ರೇಯ ನಮೋಽಸ್ತುತೆ ॥೪॥ ಯಜ್ಞಭೋಕ್ತ್ರೇ ಚ ಯಜ್ಞಾಯ ಯಜ್ಞರೂಪಧರಾಯಚ । ಯಜ್ಞಪ್ರಿಯಾಯ ಸಿದ್ಧಾಯ ದತ್ತಾತ್ರೇಯ ನಮೋಽಸ್ತುತೆ ॥ ೫ ॥ ಆದೌ ಬ್ರಹ್ಮಾ ಮಧ್ಯೆ ವಿಷ್ಣು ರಂತೇ ದೇವಃ ಸದಾಶಿವಃ । ಮೂರ್ತಿತ್ರಯಸ್ವರೂಪಾಯ ದತ್ತಾತ್ರೇಯ ನಮೋಽಸ್ತುತೆ ॥ ೬ ॥ ಭೋಗಾಲಯಾಯ ಭೋಗಾಯ ಯೋಗ್ಯಯೋಗ್ಯಾಯ ಧಾರಿಣೆ । ಜಿತೇಂದ್ರಿಯ ಜಿತಜ್ಞಾಯ ದತ್ತಾತ್ರೇಯ ನಮೋಽಸ್ತುತೆ ॥೭॥ ದಿಗಂಬರಾಯ ದಿವ್ಯಾಯ ದಿವ್ಯ ರೂಪಧರಾಯ ಚ । ಸದೋದಿತ ಪರಬ್ರಹ್ಮ ದತ್ತಾತ್ರೇಯ ನಮೋಽಸ್ತುತೆ ॥ ೮ ॥ ಜಂಬೂದ್ವೀಪೇ ಮಹಾಕ್ಷೇತ್ರೇ ಮಾತಾಪುರನಿವಾಸಿನೇ । ಜಯಮಾನಸತಾಂ ದೇವ ದತ್ತಾತ್ರೇಯ ನಮೋಽಸ್ತುತೆ ॥ ೯ ॥ ಭಿಕ್ಷಾಟನಂ ಗೃಹೇ ಗ್ರಾಮೇ ಪಾತ್ರಂ ಹೇಮಮಯಂ ಕರೇ । ನಾನಾ ಸ್ವಾದಮಯೀ ಭಿಕ್ಷಾ ದತ್ತಾತ್ರೇಯ ನಮೋಽಸ್ತುತೆ ॥ ೧೦ ॥ ಬ್ರಹ್ಮಜ್ಞಾನಮಯೀ ಮುದ್ರಾ ವಸ್ತ್ರೇ ಚಾಕಾಶ ಭೂತಲೇ । ಪ್ರಜ್ಞಾನ ಘನಬೋಧಾಯ ದತ್ತಾತ್ರೇಯ ನಮೋಽಸ್ತು ತೆ ॥ ೧೧ ॥ ಅವಧೂತ ಸದಾನಂದ ಪರಬ್ರಹ್ಮಸ್ವರೂಪಿಣೇ । ವಿದೇಹ ದೇಹರೂಪಾಯ ದತ್ತಾತ್ರೇಯ ನಮೋಽಸ್ತುತೆ ॥ ೧೨ ॥ ಸತ್ಯರೂಪ ಸದಾಚಾರ ಸತ್ಯಧರ್ಮ ಪರಾಯಣ । ಸತ್ಯಾಶ್ರಯ ಪರೋಕ್ಷಾಯ ದತ್ತಾತ್ರೇಯ ನಮೋಽಸ್ತುತೆ ॥ ೧೩ ॥ ಶೂಲಹಸ್ತಗದಾಪಾಣೇ ವನ ಮಾಲಾಸುಕಂಧರ । ಯಜ್ಞಸೂತ್ರಧರ ಬ್ರಹ್ಮನ್ ದತ್ತಾತ್ರೇಯ ನಮೋಽಸ್ತುತೆ ॥ ೧೪ ॥ ಕ್ಷರಾಕ್ಷರಸ್ವರೂಪಾಯ ಪರಾತ್ಪರತರಾಯ ಚ । ದತ್ತಮುಕ್ತಿ ಪರಸ್ತೋತ್ರ ದತ್ತಾತ್ರೇಯ ನಮೋಽಸ್ತುತೆ ॥ ೧೫ ॥ ದತ್ತ ವಿದ್ಯಾಢ್ಯ ಲಕ್ಷ್ಮೀಶ ದತ್ತ ಸ್ವಾತ್ಮಸ್ವರೂಪಿಣೇ । ಗುಣನಿರ್ಗುಣರೂಪಾಯ ದತ್ತಾತ್ರೇಯ ನಮೋಽಸ್ತುತೆ ॥ ೧೬ ॥ ಶತ್ರುನಾಶಕರಂ ಸ್ತೋತ್ರಂ ಜ್ಞಾನವಿಜ್ಞಾನದಾಯಕಂ । ಸರ್ವ ಪಾಪಂ ಶಮಂ ಯಾತಿ ದತ್ತಾತ್ರೇಯ ನಮೋಽಸ್ತುತೆ ॥ ೧೭ ॥ ಇದಂ ಸ್ತೋತ್ರಂ ಮಹದ್ದಿವ್ಯಂ ದತ್ತಪ್ರತ್ಯಕ್ಷ ಕಾರಕಮ್ । ದತ್ತಾತ್ರೇಯ ಪ್ರಸಾದಾಚ್ಚ ನಾರದೇನ ಪ್ರಕೀರ್ತಿತಮ್ ॥ ೧೮ ॥

**ಇತಿ ಶ್ರೀನಾರದ ಪುರಾಣೇ ನಾರದವಿರಚಿತಂ ದತ್ತಾತ್ರೇಯ ಸ್ತೋತ್ರಮ್ ಸಂಪೂರ್ಣಮ್**

ಶ್ರೀ ಗುರುಭ್ಯೋ ನಮಃ

## ಸಾಯಂಕಾಲದ ಭಜನೆಯು

(ಗಜಾನನ ಸ್ತುತಿ)

### ಭಜನಾ

**ಗಣೇಶಗೌರೀ ಹರನಂದನಾ। ವಿಘ್ನವಿನಾಶಾ ಗಜಾನನಾ ॥**

### ಪ್ರಾರ್ಥನಾ

ವಕ್ರತುಂಡ ಮಹಾಕಾಯ ಸೂರ್ಯಕೋಟಿಸಮಪ್ರಭ।
ನಿರ್ವಿಘ್ನಂ ಕುರು ಮೇ ದೇವ ಶುಭಕಾರ್ಯೇಷು ಸರ್ವದಾ ॥

### ಪದ

ರಾಗ—ಭೂಪ ತಾಳ—ತ್ರಿವಟ

ವಂದನೆ ಮಾಳ್ಪೆವು ಸುಂದರ ಗಜಮುಖ। ನಂದಿವಾಹನಸುತ ವೇದವಿನುತನೇ ॥ ಪ ॥

ಸಕಲಕಾರ್ಯಗಳ ಮೊದಲಿಗೆ ಸ್ತುತಿಪರು।
ಶುಕ್ಲಾಂಬರಧರ ಮಂಗಲ ಮೂರ್ತಿಯೇ ॥ ೧ ॥

ಲಂಬೋದರ ಹೇರಂಬ ಸುರವರ। ಅಂಬಾತನಯಾ ವಿಘ್ನ ವಿದೂರಾ ॥ ೨ ॥

ತೋಷಗೊಳಿಪುದೈ ತವ ದಾಸರನಾ। ಮೂಷಕವಾಹನ ಕರುಣಿಸಿ ಶುಭಮತಿ ॥ ೩ ॥

— ವೇ. ಲಿಂಗಾಭಟ್ಟ ಪೂಜಾರ, ಬಂಕಾಪೂರ

## ಶಾರದಾಸ್ತುತಿ

### ಭಜನಾ

**ಬ್ರಹ್ಮಶಕ್ತಿ ಶ್ರೀ ಶಾರದೆಯೇ। ಬ್ರಹ್ಮಜ್ಞಾನವ ಕೊಡು ತಾಯೇ।**
**ವೀಣಾಪಾಣಿ ಸರಸ್ವತಿಯೇ। ವಿದ್ಯಾಬುದ್ಧಿಯ ದೇವತೆಯೇ ॥**

### ಪ್ರಾರ್ಥನೆ

ಯಾ ಕುಂದೇಂದುತುಷಾರಹಾರಧವಳಾ ಯಾ ಶುಭ್ರವಸ್ತ್ರಾವೃತಾ।
ಯಾ ವೀಣಾವರದಂಡಮಂಡಿತಕರಾ ಯಾ ಶ್ವೇತಪದ್ಮಾಸನಾ

ಯಾ ಬ್ರಹ್ಮಾಚ್ಯುತಶಂಕರಪ್ರಭೃತಿಭಿರ್ದೇವೈಃ ಸದಾವಂದಿತಾ ।
ಸಾ ಮಾಂ ಪಾತು ಸರಸ್ವತೀ ಭಗವತೀ ನಿಶ್ಶೇಷಜಾಡ್ಯಾಪಹಾ ॥

## ಪದ

ರಾಗ— ಯಮನ ತಾಳ—ತ್ರಿವಟ

ಶಾರದಾಂಬೆ ನಮಿಪೆ ತವ ಚರಣಕೆ ।
ವಾರಿಜೋದ್ಭವನ ರಾಣಿಯೇ ಮುದದಲಿ ॥ ಪಲ್ಲ ॥
ವಾಣಿಯೇ ವಾಗ್ದೇವಿಯೇ ಸರಸ್ವತಿಯೇ ।
ಜಾಣಿಯೇ ನೀ ನಲಿದೊಲಿಯುತ ಪಾಲಿಸು ॥ ೧ ॥
ವೇಣವತೀ ಭಗವತೀ ಶುಭಮತಿ ।
ಬೋಧಿಸೆನಗೆ ತವ ಮಂಜುಳ ನುಡಿಯಲಿ ॥ ೨ ॥
ಸುಲಲಿತ ಭಜನೆಯ ಹಾಡಲು ದೇವಿ ।
ನೆಲಿಸು ಬಾ ಎನ್ನ ನಾಲಿಗೆಯೊಳು ನೀ ॥ ೩ ॥

— ವೇ. ಲಿಂಗಾಭಟ್ಟ ಪೂಜಾರ

## ಧ್ಯಾನ

ದಿಗಂಬರಂ ಭಸ್ಮಸುಗಂಧಲೇಪನಂ ಚಕ್ರಂ ತ್ರಿಶೂಲಂ ಡಮರುಂ ಗದಾಂ ಚ ।
ಪದ್ಮಾಸನಸ್ಥಂ ರವಿಸೋಮನೇತ್ರಂ ದತ್ತಾತ್ರೇಯಧ್ಯಾನಮಭೀಷ್ಟಸಿದ್ಧಿದಂ ॥
ಜಟಾಧರಂ ಪಾಂಡುರಂಗಂ ಶೂಲಹಸ್ತಂ ಕೃಪಾನಿಧಿಂ ।
ಸರ್ವರೋಗಹರಂ ದೇವ ದತ್ತಾತ್ರೇಯಮಹಂ ಭಜೆ ॥

## ಸ್ತೋತ್ರ ಭಜನಾ

ದತ್ತಾತ್ರೇಯಾ ತವ ಶರಣಂ । ದತ್ತನ್ನಾಥಾ ತವ ಶರಣಂ ।
ತ್ರಿಗುಣಾತ್ಮಕಾ ತ್ರಿಗುಣಾತೀತಾ । ತ್ರಿಭುವನಪಾಲಕ ತವ ಶರಣಂ ॥ ೧ ॥
ಶಾಶ್ವತಮೂರ್ತೆ ತವ ಶರಣಂ । ಶ್ಯಾಮಸುಂದರಾ ತವ ಶರಣಂ ।
ಶೇಷಾಭರಣಾ ಶೇಷಭೂಷಣಾ ಶೇಷಶಾಯಿ ಗುರು ತವ ಶರಣಂ ॥ ೨ ॥
ಷಡ್ಭುಜ ಮೂರ್ತೆ ತವ ಶರಣಂ । ಷಡ್ಭುಜ ಯತಿವರ ತವ ಶರಣಂ ।
ದಂಡ ಕಮಂಡಲು ಗದಾಪದ್ಮ ಶಂಖ ಚಕ್ರಧರ ತವ ಶರಣಂ ॥ ೩ ॥
ಕರುಣಾನಿಧೇ ತವ ಶರಣಂ । ಕರುಣಾಸಾಗರ ತವ ಶರಣಂ ।
ಶ್ರೀಪಾದ ಶ್ರೀವಲ್ಲಭ ಗುರುವರ ನರಸಿಂಹ ಸರಸ್ವತಿ ತವ ಶರಣಂ ॥ ೪ ॥

ಶ್ರೀಗುರುನಾಥಾ ತವ ಶರಣಂ । ಸದ್ಗುರುನಾಥಾ ತವ ಶರಣಂ ।
ಕೃಷ್ಣಾಸಂಗಮ ತರುತಲವಾಸೀ ಭಕ್ತವತ್ಸಲಾ ತವ ಶರಣಂ ॥ ೫ ॥
ಕೃಪಾಮೂರ್ತೆ ತವ ಶರಣಂ । ಕೃಪಾಸಾಗರಾ ತವ ಶರಣಂ ।
ಕೃಪಾಕಟಾಕ್ಷಾ ಕೃಪಾವಲೋಕನ ಕೃಪಾನಿಧೇ ಪ್ರಭು ತವ ಶರಣಂ ॥ ೬
ಕಾಲಾಂತಕಾ ತವ ಶರಣಂ । ಕಾಲನಾಶಕಾ ತವ ಶರಣಂ ।
ಪೂರ್ಣಾನಂದಾ ಪೂರ್ಣಪರೇಶಾ ಪುರಾಣಪುರುಷಾ ತವ ಶರಣಂ ॥ ೭ ॥
ಜಗದೀಶಾ ತವ ಶರಣಂ । ಜಗನ್ನಾಥಾ ತವ ಶರಣಂ ।
ಜಗತ್ ಪಾಲಕಾ ಜಗದಾಧೀಶಾ ಜಗದುದ್ಧಾರಕ ತವ ಶರಣಂ ॥ ೮ ॥
ಅಖಿಲಾಂತಕಾ ತವ ಶರಣಂ । ಅಖಿಲೈಶ್ವರ್ಯಾ ತವ ಶರಣಂ ।
ಭಕ್ತಪ್ರಿಯಾ ವಜ್ರಪಂಜರಾ ಪ್ರಸನ್ನ ವಕ್ತ್ರಾ ತವ ಶರಣಂ ॥ ೯ ॥
ದಿಗಂಬರಾ ತವ ಶರಣಂ । ದೀನದಯಾಘನ ತವ ಶರಣಂ ।
ದೀನಾನಾಥಾ ದೀನದಯಾಳಾ ದೀನೋದ್ಧಾರಾ ತವ ಶರಣಂ ॥ ೧೦ ॥
ತಪೋಮೂರ್ತೆ ತವ ಶರಣಂ । ತೇಜೋರಾಶೆ ತವ ಶರಣಂ ।
ಬೃಹ್ಮಾನಂದಾ ಬ್ರಹ್ಮಸನಾತನ ಬ್ರಹ್ಮಮೋಹನಾ ತವ ಶರಣಂ ॥ ೧೧ ॥
ವಿಶ್ವಾತ್ಮಕಾ ತವ ಶರಣಂ । ವಿಶ್ವರಕ್ಷಕಾ ತವ ಶರಣಂ ।
ವಿಶ್ವಂಭರಾ ವಿಶ್ವಜೀವನಾ ವಿಶ್ವಪರಾತ್ಪರಾ ತವ ಶರಣಂ ॥ ೧೨ ॥
ವಿಘ್ನಾಂತಕಾ ತವ ಶರಣಂ । ವಿಘ್ನನಾಶಕಾ ತವ ಶರಣಂ ।
ಪ್ರಣವಾತೀತಾ ಪ್ರೇಮವರ್ಧನಾ ಪ್ರಕಾಶಮೂರ್ತೆ ತವ ಶರಣಂ ॥ ೧೩ ॥
ನಿಜಾನಂದಾ ತವ ಶರಣಂ । ನಿಜಪದದಾಯಕ ತವ ಶರಣಂ ।
ನಿತ್ಯನಿರಂಜನ ನಿರಾಕಾರಾ ನಿಜಾಧಾರಾ ತವ ಶರಣಂ ॥ ೧೪ ॥
ಚಿದ್ಘನಮೂರ್ತೆ ತವ ಶರಣಂ । ಚಿದಾಕಾರಾ ತವ ಶರಣಂ ।
ಚಿದಾತ್ಮರೂಪಾ ಚಿದಾನಂದಾ ಚಿತ್ಸುಖಕಂದಾ ತವ ಶರಣಂ ॥ ೧೫ ॥
ಅನಾದಿಮೂರ್ತೆ ತವ ಶರಣಂ । ಅಖಿಲವತಾರಾ ತವ ಶರಣಂ ।
ಅನಂತಕೋಟಿ ಬ್ರಹ್ಮಾಂಡನಾಯಕ ಅಘಟಿತಘಟನಾ ತವ ಶರಣಂ ॥ ೧೬
ಭಕ್ತೋದ್ಧಾರಾ ತವ ಶರಣಂ । ಭಕ್ತರಕ್ಷಕಾ ತವ ಶರಣಂ ।
ಭಕ್ತಾನುಗ್ರಹ ಭಕ್ತಪ್ರಿಯಾ ಪತಿತೋದ್ಧಾರಾ ತವ ಶರಣಂ ॥ ೧೭ ॥

## ನಾಮಭಜನಾ

**ದಿಗಂಬರಾ ದಿಗಂಬರಾ ಶ್ರೀಪಾದವಲ್ಲಭ ದಿಗಂಬರಾ ।**

## ವಂದನಾ

ದಿಗಂಬರಾಯ ದಿವ್ಯಾಯ ದಿವ್ಯರೂಪಧರಾಯ ಚ
ಸದೋದಿತ ಪರಬ್ರಹ್ಮ ದತ್ತಾತ್ರೇಯ ನಮೋಽಸ್ತು ತೇ ॥ ೧ ॥

## ನಾಮ ಮಹಿಮಾ

(ಭಾಮಿನಿ ಷಟ್ಪದಿ)

ದತ್ತನಾಮೋಚ್ಚರಣೆ ಭವ ಕ । ಗ್ಗತ್ತಲೆಗೆ ಸೂರ್ಯಪ್ರಕಾಶವು ।
ಸತ್ತ ಭೂತಪಿಶಾಚಗಣಕುಚ್ಚಾಟನೆಯ ಮಂತ್ರಾ ॥
ದತ್ತವೆಂಬೆರಡಕ್ಕರಂಗಳು । ಕತ್ತರಿಯು ಸಂಸಾರಪಾಶಕೆ ।
ಉತ್ತಮೋತ್ತಮ ವೃದ್ಧಿಬೀಜವು ದತ್ತನಾಮವಿದು ॥ ೧ ॥

— ಶ್ರೀದತ್ತ ಭಕ್ತಮಂಡಲ, ಕುಕನೂರ

## ಪದ

ರಾಗ—ಖಮಾಜ  ತಾಳ—ತ್ರಿತಾಳ

ಭಜನೆಯ ಮಾಡೋ ದತ್ತಗುರುವಿನಾ ॥ ಪಲ್ಲ ॥
ಗಾಣಗಾಪುರದ ಕ್ಷೇತ್ರದಿ ಮೆರೆಯುವ ಶ್ರೀ ನರಸಿಂಹನ ಮೂರ್ತಿ
ಯನುದಿನಾ ॥ ಅ.ಪ. ॥

ಬದುಕದ ವಿಪ್ರಗೆ ಮುದದಿಯುಣಿಸಿ ಘನ ಉದರಶೂಲೆಯನು ಕಳೆದ
ಗುರುವರನಾ ॥ ೧ ॥

ತರುಣಿ ಪರಾನ್ನವ ನಿರುತದಿ ಬಯಸಲು । ಮುದದಿಯುಚ್ಛಿಷ್ಟವ
ತೋರಿದ ಗುರುಗಳ ॥ ೨ ॥

ಎಂಟು ಶಿಷ್ಯರ ಚಿಂತೆಯ ಕಳೆಯಲು । ಸಂತನು ತೋರಿದನೆಂಟು
ರೂಪವಾ ॥ ೩ ॥

## ಸ್ತೋತ್ರ ಭಜನಾ

ರಾಗ—ಗಾರಾಖಮಾಚ  ತಾಳ—ಏಕ

ಶ್ರೀಪಾದ ಶ್ರೀವಲ್ಲಭ ನರಹರಿ । ದತ್ತಾತ್ರಯ ಗುರು ನಮೋ ನಮೋ ।
ಕಾಪಾಡೆನ್ನನು ಶ್ರೀಗುರುನಾಥಾ । ಆಪದ್ಬಂಧುವೆ ನಮೋ ನಮೋ ॥ ಪಲ್ಲ ॥

ಅನಸೂಯೆಯ ಮಗನಾಗಿ ದತ್ತನೆಂ। ದೆನಿಸಿದ ದೇವಾ ನಮೋ ನಮೋ।
ಘನಮಹಿಮನೆ ಭಕ್ತೋದ್ಧಾರಕನೇ। ಚಿನುಮಯ ಮೂರ್ತೇ ನಮೋನಮೋ
ಆಪಳಸತಿಯೊಳು ಹುಟ್ಟಿದ। ಶ್ರೀಪಾದ ಶ್ರೀವಲ್ಲಭ ನಮೋ ನಮೋ।
ಈ ಪೊಡವಿಯೊಳತಿ ಪವಿತ್ರಕೀರ್ತಿಯ। ವ್ಯಾಪಿಸಿದ ಪ್ರಭು ನಮೋ ನಮೋ॥೨॥
ನರಹರಿ ನಾಮದಿ ಅಂಬಾಮಾಧವ। ರೊಳು ಹುಟ್ಟಿದವನೇ ನಮೋ ನಮೋ।
ನರಸಿಂಹ ಸರಸ್ವತಿ ಯತಿರೂಪಡ। ಪರಮಾತ್ಮ ನಿನಗೆ ನಮೋ ನಮೋ ॥೩॥
ಕಾಮಿತ ಫಲವಂ ಭಕ್ತರಿಗೀಯುವ। ಕಾಮಧೇನುವೇ ನಮೋ ನಮೋ।
ಭೂಮಿಯೊಳಗೆ ಚಿಂತಿತಾರ್ಥವೀಯುವ। ಚಿಂತಾಮಣಿಯೇ ನಮೋ ನಮೋ॥
ಪರಮಭಕ್ತರಿಗೆ ಕಲ್ಪಿತ ಫಲವೀವ। ಕಲ್ಪತರುವೇ ನಮೋ ನಮೋ।
ಕರುಣಾಕರ ನಮೋ ತಾಪತ್ರಯ ಪರಿ। ಹರಿಸುವ ದೇವಾ ನಮೋ ನಮೋ॥೫॥
ಬರಡೆಮ್ಮೆಯ ಹಿಂಡಿಸಿ ಬಹು ಹಾಲನು। ಸುರಿಸಿದ ದೇವಾ ನಮೋ ನಮೋ।
ಕರುಣೆಯಿಂದ ಸಾವಿತ್ರಿಯ ಗಂಡನ। ಬದುಕಿಸಿದ ಪ್ರಭು ನಮೋ ನಮೋ ॥೬॥
ಎಳೆಬೆಳೆ ಕೊಯ್ಯುತೆ ಒಕ್ಕಲಿಗಗೆ ಬಹು। ಬೆಳೆ ತೋರಿದವನೇ ನಮೋನಮೋ।
ಹೊಲೆಯನ ಕಡೆಯಿಂ ವಿಪ್ರರ ಗರ್ವವ। ನಿಳಿಸಿದ ದೇವಾ ನಮೊ ನಮೋ ॥೭॥
ನರಹರಿ ಎಂಬುವ ವಿಪ್ರನ ಕುಷ್ಟವ। ಪರಿಹರಿಸಿದವನೇ ನಮೋ ನಮೋ।
ಪರಿ ಪರಿರೋಗ ಪಿಶಾಚ ಬಾಧೆಗಳ। ಕಳೆಯುವ ದೇವಾ ನಮೋ ನಮೋ ॥೮॥
ದಂಡ ಕಮಂಡಲು ಶಂಖ ಚಕ್ರಗಳ। ಧರಿಸಿದ ದೇವಾ ನಮೋ ನಮೋ।
ಖಂಡಿಸೆ ತಾಪತ್ರಯವ ತ್ರಿಶೂಲದಿ। ಮಂಡಿತ ಹಸ್ತನೆ ನಮೋ ನಮೋ ॥೯॥
ಜಟಾಜೂಟ ರುದ್ರಾಕ್ಷ ವಿಭೂತಿ। ವಿಭೂಷಿತ ಮೂರ್ತೆ ನಮೋ ನಮೋ।
ಕಟಾಕ್ಷದಿಂದೀಕ್ಷಿಸಿ ಪಾಪವ ಕಳೆಯುವ ಕರುಣಾಳೋ ನಮೋ ನಮೋ ॥೧೦॥
ಪ್ರದಕ್ಷಿಣೆಯ ಹಾಕುವ ಜನರಿಗೆ ಸುರ। ಪದವೀಯುವವನೆ ನಮೋ ನಮೋ।
ಮುದದಿಂದಲೆ ಸಾಷ್ಟಾಂಗನಮಿಸುವವ। ರಿಮರಿಗೆ ತೋರ್ಪನೆ ನಮೋ ನಮೋ॥
ಪಾರಾಯಣ ಮಾಡುವರ ದುಃಖಗಳ। ದೂರಮಾಡುವನೇ ನಮೋ ನಮೋ।
ತೋರುತೆ ಸ್ವಪ್ನದಿ ಮಾತಾಡುವ ಬಹು। ಕಾರುಣ್ಯಾಬ್ಧಿಯೇ ನಮೋ ನಮೋ॥
ಶ್ರೀಪಾದ ನಮೋ ಶ್ರೀವಲ್ಲಭ ನಮೋ। ನರಸಿಂಹಯತೇ ನಮೋ ನಮೋ।
ಪವಿತ್ರ ಗಾಣಗಾಪುರದೊಳಗಿರುತಿಹ। ಪಾಪನಾಶಕನೆ ನಮೋ ನಮೋ ॥೧೩॥
ಹರಿರೂಪ ನಮೋ ಹರರೂಪ ನಮೋ। ಬ್ರಹ್ಮರೂಪನೇ ನಮೋ ನಮೋ।
ಪರಬ್ರಹ್ಮ ನಮೋ ತಾಪತ್ರಯ ಪರಿ। ಹರಿಸುವ ದೇವಾ ನಮೋನಮೋ ॥೧೪॥

ಪರಮಭಕ್ತರಿಗೆ ಬೇಡಿದ ಫಲವನು । ಕೊಡುವ ದೇವನೇ ನಮೋ ನಮೋ ।
ಪರಮದಯಾಳೋ ನಿಜಸೌಖ್ಯವ। ಕೊಡು ಶಿವಾನಂದವಿಭು ನಮೋನಮೋ॥

## ಅವತಾರ ಭಜನ

ರಾಗ—ಪಹಾಡಿ ತಾಳ—ಕವಾಲೀ

**ದತ್ತಾತ್ರಯಾ ಶ್ರೀಪಾದರಾಯಾ ।**
**ನರಸಿಂಹ ಸರಸ್ವತೀ ಯತಿರಾಯಾ ॥**

### ವಂದನಾ

ಜರಾಜನ್ಮವಿನಾಶಾಯ ದೇಹಶುದ್ಧಿಕರಾಯ ಚ ।
ದಿಗಂಬರ ದಯಾಮೂರ್ತೇ ದತ್ತಾತ್ರೇಯ ನಮೋಽಸ್ತುತೇ ॥

### ನಾಮ ಮಹಿಮಾ

( ಭಾಮಿನಿ ಷಟ್ಪದಿ )

ದತ್ತನಾಮವ ಹಾಡು ಜಿಹ್ವೆಯೆ । ದತ್ತಮೂರ್ತಿಯ ನೋಡು ನೇತ್ರವೆ ।
ದತ್ತಪಾದಕೆ ಬಾಗಿ ವಂದಿಸು ಸಿರವೆ ಭಕ್ತಿಯಲಿ ॥
ದತ್ತಭಜನೆಯ ಕೇಳು ಕರ್ಣವೆ । ದತ್ತಮೂರ್ತಿಗೆ ನಮಿಸಿ ಕರಗಳೆ ।
ದತ್ತಸೇವಾಸಕ್ತಿಯಲ್ಲಿಯೆ ಜನ್ಮ ಸಾರ್ಥಕವು ॥ ೧ ॥

— ಶ್ರೀದತ್ತ ಭಕ್ತಮಂಡಲ, ಕುಕನೂರ.

## ಪದ

ರಾಗ—ಕಾಪಿ ತಾಳ—ತ್ರಿವಟ

(ಧಾಟಿ:— ಸಮರಕೆ ಪೋಗು ಪರಾಕ್ರಮಿಯೇ)

ತೋರಿಸೋ ನಿನ್ನಯ ರೂಪವನಾ ॥ ಪಲ್ಲ ॥
ಗುರುವೇ ಕಲ್ಪತರುವೇ ಭಜಿಸುವೆ ॥ ಅ.ಪಲ್ಲ ॥
ದರುಶನಕಾಗಿ ಬಾಗಿಲ ಬಳಿ ನಾ ನಿಂತಿಹೆನು ಸದಯಾ ।
ತಿರುಗಿ ತಿರುಗಿ ಬಂದಿಹೆನು ಕರುಣಿಸು ಕಾಷಾಯಾಂಬರದ ಕಾಯದಾ ॥ ೧ ॥
ಮುಸುಕಿದ ಮಾಯಾ ಮೋಹದ ಬಲೆಯಾ ಜಾರಿಸಿ ರಕ್ಷಿಸುವಾ ।
ನಸುನಗೆಯಾ ಸಲೆ ತೋಷಬೀರುವಾ ಕಿರಿಮೊಗದಾ ಚೆಲುವಾ ಶೋಭಿಸುವಾ ॥

ಮಣಿಯುಲಿ ಮತಿಯು ಬಾಗಲಿ ಮನವು ಭಾವಭಕುತಿ ಬೆಳೆದು ।
ತನುವಿದು ನಿಲ್ಲಲಿ ತವಪದಪಡೆಯಲಿ ಅನುದಿನ ಸೇವಿಸಲು ಗುರುವರಾ ॥೩॥

—ವೇ. ಲಿಂಗಾಭಟ್ಟ ಪೂಜಾರ, ಬಂಕಾಪೂರ.

## ಸ್ತೋತ್ರ ಭಜನೆಯು

(ಧಾಟಿ:— ಕೃಷ್ಣ ಕೃಷ್ಣ ಜೈ ರಾಧಾಕೃಷ್ಣ ಎಂಬಂತೆ)

ದತ್ತ ದತ್ತ ಗುರು ದತ್ತ ನಿರಂಜನ ।
ದತ್ತಾತ್ರಯ ಗುರು ಭವಭಯ ಭಂಜನ ॥ ಪಲ್ಲ ॥

ಅತ್ರಿತಪಃಫಲದಾಯಕ ದತ್ತಾ । ಅನಸೂಯಾಪ್ರಿಯನಂದನ ದತ್ತಾ ।
ಆನಂದಾಬ್ಧಿವಿಹಾರಕ ದತ್ತಾ । ಆನತ ಭಕ್ತವರಪ್ರದ ದತ್ತಾ ॥ ೧ ॥
ಕಾಷಾಯಾಂಬರ ಶೋಭಿತ ದತ್ತಾ । ಕೃಷ್ಣಾತಟವಮಠ ವಿಹರಣ ದತ್ತಾ ।
ಕಲಿಕಲ್ಮಷ ವಿಧ್ವಂಸಕ ದತ್ತಾ । ಕಾಮಿತ ಶುಭವರದಾಯಕ ದತ್ತಾ ॥ ೨ ॥
ಪತಿತೋದ್ಧಾರಕ ಪಾವನ ದತ್ತಾ । ಪರಮಾನಂದಪದಪ್ರದ ದತ್ತಾ ।
ಪಾಪಾರಣ್ಯದವಾನಲ ದತ್ತಾ । ಪಾಲಯ ಪರಮಕೃಪಾಘನ ದತ್ತಾ ॥ ೩ ॥
ತ್ರಿಗುಣಾತೀತ ನಿರಾಮಯ ದತ್ತಾ । ತ್ರಿವಿಧ ತಾಪ ಪರಿಹಾರಕ ದತ್ತಾ ।
ತ್ರೈಮೂರ್ತಿ ಅವತಾರಕ ದತ್ತಾ । ತ್ರಿಜಗದ್ವಂದ್ಯ ಪದಾಂಬುಜ ದತ್ತಾ ॥೪॥
ಭಕ್ತಕಾಮಕಲ್ಪದ್ರುಮ ದತ್ತಾ । ಭಜಕಾನಂದ ವಿವರ್ಧನ ದತ್ತಾ ।
ಗಾಣಗಪುರ ನಿವಾಸಕ ದತ್ತಾ । ಹರಗುರು ವರದುರಿತಾನಿ ಸಮರ್ಥಾ ॥೫॥

—ವೇ. ಮಲ್ಹಾರ ದೀಕ್ಷಿತ ಕಕ್ಕನವರ, ಹಾವೇರಿ.

## ಭಜನಾ

**ಗುರುಮಹಾರಾಜ ಗುರು ಜೈಜೈ ಪರಬ್ರಹ್ಮ ಸದ್ಗುರು ।**
**ಶರಣಾಗತರ ಪರಿಪಾಲಿಸುವ ಉದಾರ ಕಲ್ಪತರು ॥**

## ವಂದನಾ

ಆನಂದಮಾನಂದಕರಪ್ರಸನ್ನಂ । ಜ್ಞಾನಸ್ವರೂಪಂ ನಿಜಬೋಧರೂಪಂ ।
ಯೋಗೀಂದ್ರವಂದ್ಯಂ ಭವರೋಗ ವೈದ್ಯಂ । ಶ್ರೀಮದ್ಗುರುಂ ನಿತ್ಯ
ಮಹಂ ನಮಾಮಿ ॥

## ಗುರುಮಹಿಮಾ

(ಭಾಮಿನಿ ಷಟ್ಪದಿ)

ಗುರುವೆ ನಿನ್ನಯ ಚರಣಮಘಸಂ। ಹರಣ ಪತಿತೋದ್ಧರಣ ಪಾವನ।
ಪರಮ ಮಂಗಲಸದನ ಭವಸಾಗರದ ಉತ್ತರಣ ॥
ಶರಣರಿಗೆ ಸುಖಕರಣಮಂತಃ। ಕರಣಶುದ್ಧೀಕರಣ ಷಡ್ರಿಪು।
ಹರಣ ನಿನ್ನಯ ನಾಮವೈ ಶ್ರೀ ದತ್ತಗುರುರಾಯಾ ॥ ೧ ॥

ಶ್ರೀಗುರುವೆ ನಿನ್ನಂಘ್ರಿ ಪದ್ಮಪ। ರಾಗ ಭೋಗಿಪ ಭೃಂಗವೀ ಮನ।
ವಾಗಿ ರಮಿಸಲಿ ಜಿಹ್ವೆ ನಿನ್ನಯ ನಾಮಕೀರ್ತನದಿ ॥
ಜಾಗರಣೆಯಿಂದಿರಲಿ ಸಂತತ। ಬಾಗಿಸುತ ಶಿರ ಬೇಡುವೆವು ಭವ।
ಸಾಗರವ ನೀ ದಾಟಿಸೈ ಶ್ರೀ ದತ್ತ ಗುರುರಾಯಾ ॥ ೨ ॥

—ಶ್ರೀ ದತ್ತ ಭಕ್ತಮಂಡಲ, ಕುಕನೂರು.

## ಪದ

ರಾಗ— ಕಾಪಿ ತಾಳ—ಅಭಂಗಚಾಲ

ಭವ್ಯಚರಿತ ಶ್ರಾವ್ಯಕೀರ್ತಿ। ದಿವ್ಯಜ್ಞಾನಿ ದತ್ತಮೂರ್ತಿ ॥ ಪಲ್ಲ ॥
ದತ್ತರಾಜ ರೂಪಧ್ಯಾನಾ। ನಿತ್ಯ ಮಾಡೆಲೋ ಮಾನವಾ ॥ ೧ ॥
ಅರುಣಕಾಂತಿವಂತಕಾಯಾ। ಪರಮ ಸುಂದರಾ ಚಿನುಮಯಾ ॥ ೨ ॥
ಸ್ವರ್ಣಹಾರದುನ್ನತ ಹೃದಯಾ। ಚನ್ನಮೂರುತೀ ಆತ್ರೇಯಾ ॥ ೩ ॥
ಭಕ್ತಕಾಮ ಕಲ್ಪದ್ರುಮಾ। ಮುಕ್ತಮಾನಸ ವಿಶ್ರಾಮಾ ॥ ೪ ॥
ಅಂತರ್ಬಾಹ್ಯ ಬ್ರಹ್ಮನಿಷ್ಠಾ। ಸಂತಸದ್ಗುರೂವರಿಷ್ಠಾ ॥ ೫ ॥
ಮಾನವಾವತಾರೀ ಬ್ರಹ್ಮಾ। ಗಾನಲೋಲ ಯೋಗೀಶಾತ್ಮಾ ॥ ೬ ॥

— ಯೋಗೀಶ್ವರ ದತ್ತೂದೀಕ್ಷಿತರು, ಹುಬ್ಬಳ್ಳಿ

## ಸ್ತೋತ್ರ ಭಜನೆಯು

( ಧಾಟಿ:— ಚಂದ್ರಶೇಖರ, ಚಂದ್ರಶೇಖರ ಎಂಬಂತೆ )

ಅತ್ರಿನಂದನ ಅತ್ರಿನಂದನ ಅತ್ರಿನಂದನ ಪಾಹಿ ಮಾಂ ॥
ಅತ್ರಿನಂದನ ಅತ್ರಿನಂದನ ಅತ್ರಿನಂದನ ರಕ್ಷ ಮಾಂ ॥ ಪಲ್ಲ ॥

ತೇಜಸಾತ್ಮಸ್ವಯಂಪ್ರಕಾಶ ದಿಗಂತ ದಾಟಿ ಪ್ರಕಾಶಿಪ। ನೈಜನಿರ್ಮಲ ನಿರ್ವಿಕಲ್ಪ ನಿರಂತರಾನಂದಸ್ಥಿತಾ। ಮೂಜಗಾಂತರ ಸಾಕ್ಷಿಭೂತ ಸ್ವತಂತ್ರದಿಂ ಸಂಚಾಲಿಪ। ಭೋ ಜಗದ್ಗುರು ದೇವವರ ಶ್ರೀಪಾದವಲ್ಲಭ ರಕ್ಷ ಮಾಂ ॥ ೧ ॥

ನೀನೆ ಬ್ರಹ್ಮನು ನೀನೆ ವಿಷ್ಣುವು ನೀನೆ ರುದ್ರನು ಸಾಂಬನು। ನೀನೆ ಮಂಗಲ ಮೂರ್ತಿ ನೀನೇ ಇಂದ್ರ ಭಾಸ್ಕರ ಸೋಮನು। ನೀನೆ ಅಗ್ನಿಯು ನೀನೆ ಮರುತನು ನೀನೆ ವಿಶ್ವೇದೇವನು। ಭೋ ಜಗದ್ಗುರು ... ॥ ೨ ॥ ನೀನೆ ಶಕ್ತಿಯು ನೀನೆ ಪ್ರಕೃತಿಯು ನೀನೆ ವಾಣಿಯು ವಿದ್ಯೆಯು। ನೀನೆ ಧೃತಿಮತಿ ಕೀರ್ತಿ ಸೌಂದರ್ಯಾಭಿವೃದ್ಧಿಯ ದೇವಿಯು। ನೀನೆ ಸಾಕ್ಷಾತ್ ಅನ್ನ ಪೂರ್ಣೆಯು ನೀನೆ ಸಂಪದ್ದೇವತೆ। ಭೋ ಜಗದ್ಗುರು....॥ ೩ ॥ ನೀನೆ ಅಕ್ಷರ ಶಬ್ದ ನೀನೇ ಮಂತ್ರ ನಾಲ್ಕೂ ವೇದವು। ನೀನೆ ಶ್ರುತಿ ಸ್ಮೃತಿ ಶಾಸ್ತ್ರ ಕಾವ್ಯ ಪುರಾಣ ಉಪನಿಷದಾತ್ಮವು। ನೀನೆ ರಸವು ನೀನೆ ಗಂಧವು ನೀನೆ ಹರಿವ ಅಮೃತಾಬ್ಧಿಯು। ಭೋ ಜಗದ್ಗುರು....॥ ೪ ॥ ನೀನೆ ವೇದವ್ಯಾಸ ನಾರದ ಸಪ್ತಋಷಿ ವಾಲ್ಮೀಕಿಯು। ನೀನೆ ಸನಕಾದ್ಯಖಿಲಯೋಗೀಶ್ವರರು ನೀನೆ ಕಪಿಲನು। ನೀನೆ ಸುರಗಂಧರ್ವ ನಾಗರು ನೀನೆ ಖೇಚರಭೂಚರ। ಭೋ ಜಗದ್ಗುರು....॥ ೫ ॥ ನೀನೆ ಸೇವ್ಯನು ನೀನೆ ಪೂಜ್ಯನು ನೀನೆ ಜಗಕತಿ ವಂದ್ಯನು। ನೀನೆ ಸೇವಕಜನಕೆ ಸುಲಭದಿ ಒಲಿವ ಸದ್ಗುರುನಾಥನು। ನೀನೆ ಪತಿತೋದ್ಧಾರಕನು ಕರುಣಾಬ್ಧಿಯುತ ಸಂಪೂರ್ಣನು। ಭೋ ಜಗದ್ಗುರು ....॥ ೬ ॥ ದತ್ತ ಶ್ರೀಗುರು ನಾರಸಿಂಹ ಸರಸ್ವತೀಶ ಯತೀಶ್ವರಾ। ಭಕ್ತ ವತ್ಸಲ ಸರ್ವಸ್ವಾಮಿ ಸಮರ್ಥ ಶ್ರೀಯೋಗೀಶ್ವರಾ। ಸ್ವಸ್ತಿಶ್ರೀ ಸನ್ಮಂಗಳಾ ನೀ ವರಪ್ರದಾ ಸರ್ವೇಶ್ವರಾ। ಭೋ ಜಗದ್ಗುರು....॥ ೭ ॥ ಗುರುಚರಿತ್ರೆಯ ವಚನರೂಪದಿ ಪರಮಬೋಧಾಮೃತವನು। ಹರಿಯಿಸುತ ಗುರುತರ ಭವಾಬ್ಧಿಯ ಕರುಣದಿಂ ದಾಟಿಸುತಿಹೆ। ಗುರುವೆ ಪಾವನ ತರುವೆ ಪಾಮರ ನುಡಿಯನಾಲಿಸಿ ಕರುಣಿಸೋ। ಭೋ ಜಗದ್ಗುರು ದೇವವರ ಶ್ರೀಪಾದವಲ್ಲಭ ರಕ್ಷ ಮಾಂ ॥ ೮ ॥

— ವೇ. ಲಿಂಗಾಭಟ್ಟ ಪೂಜಾರ, ಬಂಕಾಪೂರ.

## ಸ್ತೋತ್ರ ಭಜನೆಯು

ರಾಗ—ಯವನ ತಾಳ—ಧುಮಾಳಿ

ಆತ್ರೇಯಾ ಆತ್ರೇಯಾ ಜಗಮಂಗಲ ದತ್ತಾತ್ರೇಯಾ ॥ ಪಲ್ಲ ॥
ವಿಶ್ವವಿರಾಜಿತ ಆತ್ರೇಯಾ। ವಿಶ್ವನಿಯಾಮಕ ಆತ್ರೇಯಾ।
ವಿಶ್ವಗುಣಾದರ್ಶಾನಂದಾತ್ಮಕ ಶಾಶ್ವತ ಗುರುದತ್ತಾತ್ರೇಯಾ ॥ ೧ ॥

ಸ್ವಸ್ತಿಕಾರಕಾ ಆತ್ರೇಯಾ। ಭಕ್ತರಕ್ಷಕಾ ಆತ್ರೇಯಾ।
ಭಕ್ತಕಾಮ ಕಲ್ಪದ್ರುಮ ನಿರುಪಮ ಮುಕ್ತಿಪ್ರದ ದತ್ತಾತ್ರೇಯಾ ॥ ೨ ॥
ದೇವವರೇಣ್ಯಾ ಆತ್ರೇಯಾ। ಪಾವನಕರುಣಾ ಆತ್ರೇಯಾ।
ದೇವಜಗದ್ಗುರು ಯೋಗಿಗಳಂತರ ಭಾವಜ್ಯೋತಿ ದತ್ತಾತ್ರೇಯಾ ॥ ೩ ॥
ಸದ್ಗುರು ಸಂಗಮ ಆತ್ರೇಯಾ। ಸದ್ವಿವೇಕಸದನಾತ್ರೇಯಾ।
ಅವಿದ್ಯಾ ಮಾಯಾ ಮೋಹ ವಿಕಾರ ಸದ್ಧಡಗಿಪ ದತ್ತಾತ್ರೇಯಾ ॥ ೪ ॥
ನರರೂಪಧರಾ ಆತ್ರೇಯಾ। ಕುರುಪುರವಾಸಾ ಆತ್ರೇಯಾ।
ಪರಮನಿರಂಜನ ಕಾರುಣಿಕಾಗ್ರಣಿ ಪುರುಷೋತ್ತಮ ದತ್ತಾತ್ರೇಯಾ॥೫॥
ಷಡ್ಗುಣಪೂರ್ಣ ಆತ್ರೇಯಾ। ಷಡ್ಭುಜ ಸುಂದರ ಆತ್ರೇಯಾ।
ಷಡ್ನಯನಾ ಸನ್ಮನದಿ ಪ್ರಕಾಶಿಸ ಷಟ್ಪದಿನುತ ದತ್ತಾತ್ರೇಯಾ ॥ ೬ ॥

— ವೇ. ಲಿಂಗಾಭಟ್ಟ ಪೂಜಾರ, ಬಂಕಾಪೂರ.

## ಭಜನಾ

ರಾಗ— ಯಮನ ತಾಳ— ಧುಮಾಳಿ

ಕರುಣಾಸಾಗರ ಗುರುಮೂರ್ತಿ। ಚರಣದಿ ನೀಡೈ ನಿಜಭಕ್ತಿ ॥೧॥
ಗುರುವಿನ ಭಜನೆಯು ಭವತರಣಾ। ತೋರುವ ತ್ವರಿತದಿ ಗುರುಕರುಣಾ ॥೨॥
ಭಜಕರ ಭಕುತಿಗೆ ಒಲಿವಾತಾ। ನಿಜಸುಖ ಶಾಂತಿಯ ಗುರುನಾಥಾ ॥೩॥
ಕರುಣಾಸಾಗರ ಗುರುದತ್ತಾ। ಶರಣಾಗತರ ಭಯಹರ್ತಾ ॥೪॥
ದತ್ತದಿಗಂಬರ ಗುರುದೇವಾ। ನಿತ್ಯದಿ ಹೃದಯದಿ ನೆಲಸಿರುವಾ ॥೫॥
ಆರ್ತಭಕ್ತರಿಗೊಲಿವಾತಾ। ಸ್ಮರ್ತೃಗಾಮಿಯು ಗುರುನಾಥಾ ॥೬॥
ದತ್ತನ ನಾಮವು ಅತಿಮಧುರಾ। ಚಿತ್ತಕೆ ಶಾಂತಿಯ ಆಧಾರಾ ॥೭॥
ನಿತ್ಯಾನಂದ ಗುರುಮೂರ್ತಿ। ಚಿತ್ತಕೆ ನೀಡೈ ನಿಜಶಾಂತಿ ॥೮॥
ಹೃದಯದಿ ಸ್ಮರಿಸಲು ಗುರುವರನಾ। ಮೋದದಿ ನೀಡುವ ಮುಕತಿಯನಾ ॥೯॥
ಅನಸೂಯಾಸುತ ಗುರುದತ್ತಾ। ಮನಸಿಗೆ ಶಾಂತಿಯ ಕೊಡುವಾತಾ ॥೧೦॥
ಸುಂದರ ರೂಪದ ಗುರುದತ್ತಾ। ವಂದನೆ ಗೈವೆವು ಭಗವಂತಾ ॥೧೧॥
ಗುರುಹರಿ ಗುರುಹರ ಗುರುಬ್ರಹ್ಮಾ। ಗುರುವೇ ಸಾಕ್ಷಾತ್ ಪರಬ್ರಹ್ಮ ॥೧೨॥

## ವಂದನಾ

ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ ||
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ||

## ನವವಿಧಭಕ್ತಿಯುತ ಶ್ರೀ ದತ್ತಗುರು ಸ್ತೋತ್ರ

(ಧಾಟಿ:— ಗೋಪೀಗೀತಾದಂತೆ)

ದತ್ತಗುರುವಿನ । ಶ್ರೀಪತೀಶನ । ಭಕ್ತಜೀವನ । ಶ್ರೀ ನೃಸಿಂಹನ ||
ಚರಣದರುಶನಾ। ಪತಿತಪಾವನಾ। ಶರಣುಬಂದೆನಾ। ಗುರುದಯಾಘನಾ ||೧||
ಶ್ರವಣಮಾಡುತಾ । ನಿನ್ನ ಸದ್ಗುಣಾ । ಭವದೊಳಾಡುತಾ । ಮರೆತು ಕಾಮನಾ||
ನಿರುತ ಗೈವುತಾ । ಪ್ರೇಮಯಾಚನಾ । ಶರಣುಬಂದೆ ನಾ । ಗುರುದಯಾಘನಾ ||೨||
ಕೀರ್ತಿಪೊಗಳುತಾ। ದಿವ್ಯಚರಿತನ। ಮೂರ್ತಿ ನೋಡುತಾ। ಮಂದಹಾಸನ||
ಚರಣಕೆರಗುತಾ । ಚಾರುಮಹಿಮನಾ । ಶರಣುಬಂದೆ ನಾ । ಗುರುದಯಾಘನಾ ||೩||
ಸ್ಮರಿಸಿ ಗುರುವನಾ । ಜಟಾಽಭರಣನ । ಅರಳುಪೂವಿನಾ । ಮಾಲೆಧರಿಪನ ||
ಅರುಣವಸನನಾ। ಶೂಲಹಸ್ತನಾ। ಶರಣುಬಂದೆ ನಾ। ಗುರುದಯಾಘನಾ ||೪||
ಪಾದಸೇವನ। ಮಾಡುತೀಮನಾ। ಸಾಧುಗೈದು ನಾ। ದೇವನಧೀನಾ||
ಇರಿಸಿ ಭಾವನಾ। ಅನನ್ಯ ಚಿಂತನಾ। ಶರಣುಬಂದೆನಾ। ಗುರುದಯಾಘನಾ||೫||
ಅರ್ಚಿಸಿ ಪದಾಂ। ಭೋಜವನುದಿನಾ। ಸಚ್ಚಿದಾಮುದಾ। ಭರಣರೂಪನಾ||
ಸುರಭಿಯೋಲ್ ಸದಾ। ಕಾಮಪೂರ್ಣನಾ। ಶರಣುಬಂದೆನಾ। ಗುರುದಯಾಘನಾ ||೬||
ವಂದಿಪೆ ಬಲು । ಹೊಳೆವ ಪದವನಾ । ಬಂದಗತ್ತಲು ಕಳೆವ ಚಂದ್ರನಾ ||
ವರಕಮಂಡಲು। ದಂಡಭೂಷಣಾ। ಶರಣುಬಂದೆ ನಾ। ಗುರುದಯಾಘನಾ ||೭||
ದಾಸ್ಯಭಾವದಿ । ಸೇವೆಸಾಧನಾ । ಹಾಸ್ಯವದನದಿ । ಮಾಡುತನಘನಾ ||
ಸರಲಹೃದಯದಿ। ಭಜಿಸಿ ದೇವನಾ। ಶರಣುಬಂದೆ ನಾ। ಗುರುದಯಾಘನಾ ||೮||
ಸಖ್ಯದಿಂದ ನಾ। ನುಡಿದ ನುಡಿಯನಾ। ವಾಕ್ಯಹೀನನಾ। ಕ್ಷಮಿಸುಚಿಧ್ಘನಾ||
ಪರಮಪಾವನಾ। ಭಕ್ತರಂಜನಾ। ಶರಣುಬಂದೆ ನಾ। ಗುರುದಯಾಘನಾ ||೯||

ಆತದ್ಧ್ಯರ್ಪಣಾ। ಪದದಿ ಮಾಳ್ಪೆ ನಾ। ಆತ್ಮಪರಮನಾ। ಬೆರೆಯಲೀ ದಿನಾ॥
ಶರಣಹನುಮನ। ನೋಡು ಈಕ್ಷಣಾ। ಶರಣು ಬಂದೆನಾ। ಗುರುದಯಾಘನಾ॥೧೦॥
ಭಕ್ತಿನವವಿಧ । ಭರಿತನುತಿಯನಾ । ನಿತ್ಯನಿಯಮದ । ಪಾಠ ಮಾಳ್ಪನ ॥
ಸತ್ಯನಿಜಪದ । ಅತ್ರಿನಂದನಾ । ಇತ್ತು ಪಾಲಿಪ । ಗುರುದಯಾಘನಾ ॥೧೧॥

—ಶ್ರೀ. ಹ. ರಾ. ದೇಸಾಯಿ, ಹಳೇಹುಬ್ಬಳ್ಳಿ

## ಗುರುಮಹಿಮಾ

(ಭಾಮಿನಿ ಷಟ್ಪದಿ)

ಗುರುವೊಲಿದರಾರೇನು ಮಾಳ್ಪರು । ಗುರುಮುನಿದರಾರೇನು ಕಾಯ್ವರು ।
ಗುರುವೆ ಕಾಯ್ವನು, ಗುರುವೆ ಸಂಹರಿಸುವನು ಮೂಜಗದಿ ॥
ಗುರುವು ಬೆಂಬಲಕಿರಲು ಯಮಕಿಂ । ಕರರು ಮಾಡುವರೇನು ಭವಸಾ ।
ಗರವ ಕುಡಿವನಗಸ್ತ್ಯನಂದದಿ ದತ್ತಗುರುರಾಯಾ ॥ ೧ ॥
ಗುರುಚರಣ ಸದ್ಭಕ್ತಿ ಮೋಕ್ಷದ । ಪರಮಸುಲಭದ ಯುಕ್ತಿ ಭವಸಾ ।
ಗರದಿ ಪಯಣದ ಬುತ್ತಿ, ಅಬಲರ ಶಕ್ತಿ, ವೇದೋಕ್ತಿ ॥
ಗುರುವೆ ನೀನೆ ಸುಮೂರ್ತಿ ಜಗದೊಳು । ಮೆರೆಯುವದು ತವಕೀರ್ತಿ ನಂಬಿದೆ ।
ಚರಣಕಮಲದ ಪ್ರೀತಿ ಕೊಡು ನೀ ದತ್ತಗುರುರಾಯಾ ॥ ೨ ॥

ಶ್ರೀದತ್ತ ಭಕ್ತಮಂಡಲ, ಕುಕನೂರು

## ಪದ

ರಾಗ:— ಯಮನ      ತಾಳ:— ಧುಮಾಳಿ

ಅತ್ರಿನಂದನಾ ದತ್ತ ಶ್ರೀಗುರುವೆ । ಉತ್ತಮಮತಿಯನು ನೀಡೈ ಪ್ರಭುವೆ ॥ಪ॥
ಸುತ್ತಲು ಮುಸುಕಿದೆ ಮಾಯೆಯ ಪರದೆ । ಸತ್ಯಸ್ವರೂಪವು ತೋರದು
ಎನಗೆ ॥ ಅ. ಪ. ॥
ಅಗಣಿತ ಜನುಮವ ತಿರುಗಿದೆ ಹಿಂದೆ । ಈಗ ನಾ, ಮಾನವಜನುಮಕೆ ಬಂದೆ ॥
ಬಗೆಯನು ಕಾಣದೆ ಬಳಲುತಲಿರುವೆ । ನೀಗಿಸು ಭವಬಾಧೆಯ ಶ್ರೀಗುರುವೆ ॥೧॥
ಮತಿಗೆಟ್ಟೆನು ನಾ, ಮಾನವನಾಗಿ । ಸತಿಸುತ ಧನಕೆ ಮೋಹಿತನಾಗಿ ॥
ಗತಿಯನು ಕೋರುವೆ ಚರಣಕೆ ಬಾಗಿ। ಪತಿತರ ಪಾವನ ಗೈಯುವ ಯೋಗಿ॥೨॥
ವಿಷಯದ ಆಶೆಯು ಮನದೊಳಗಿಹುದು। ವೇಷವು ಭಕುತರ ತೆರವಾಗಿಹುದೇ ॥
ಮೋಸವಾಗುವದು ತಿಳಿದೂ ತಿಳಿದು । ಈಶನೆ ಪೋಷಿಸು ವಾಸನೆ ಕಳೆದು ॥೩॥

(ಸಾಯಂಕಾಲ ಪೂಜಾ ಆರತಿ—ಮಂತ್ರ ಪುಷ್ಪ—ಸ್ತೋತ್ರ—ಪ್ರಾರ್ಥನ ವಗೈರೆ)

## ಆರತಿಯ ಪದಗಳು

### ಪದ ೧

ರಾಗ:— ಪಹಾಡಿ ತಾಳ:— ಕವಾಲಿ

ದಯಾಘನ ದತ್ತರಾಜಮೂರ್ತಿ । ಆರತಿ । ಜಯ ಜಯ ತ್ರಯಮೂರ್ತೀ ॥ಪಲ್ಲ॥
ಎರಗಿದಾ ನರರ ಹಣೆಯೊಳಿರುವಾ । ದುರಿತವಾ, ದಹಿಸುವ ಗುರುದೇವಾ ।
ಕರುಣೆಯಾ ಸೆಲೆಯ ಹರಿಸಿ ಮನವಾ । ರಮಿಸುವಾ ಸಗುಣದ ಸದ್ಭಾವಾ ॥೧॥
ಭಜಕ ಜನ ಕಾಮಕಲ್ಪಭೂಜಾ । ಕುಜನಕುಲ ಕಂಗೆಡಿಸುವ ತೇಜಾ ।
ನಿಜದ ನೆಲೆಗಿಳಿಸುವ ಗುರುರಾಜಾ । ವಿಜಯದಾ ಮೂರುತಿ ಯತಿರಾಜಾ ॥೨॥
ಗಾಣಗಾಪುರ ನಿರ್ಗುಣಪಾದಾ । ಕೃಷ್ಣೆಯಾ ಔದುಂಬರಪಾದಾ ।
ಧ್ಯಾನಿಪೆ ಅಮರಾಪುರಪಾದಾ । ಕುರವಪುರ ತಾಣದ ಶ್ರೀಪಾದಾ ॥೩॥
ಮಣಿಯುವೇ ಕರುಣಿಸು ಅವಧೂತಾ। ಚಿನುಮಯಾ ಕೇವಲ ಸುಖದಾತಾ।
ದಣಿಯದೇ ಯೋಗೀಶ್ವರಚಿತ್ತಾ । ತಣಿಯಲೀ ಗುಣಗಾನದಿ ದತ್ತಾ ॥೪॥

### ಪದ ೨

( ಧಾಟಿ:— ಸತ್ಯವದೆ ವಚನಾಲಾ ನಾಥಾ )

ಆರತಿ ಜಯಗುರುದೇವ ಸಮರ್ಥಾ । ಕರುಣಾನಿಧಿ ಅವಧೂತಾ ದತ್ತಾ ॥ಪಲ್ಲ॥
ಸದಾದಿಗಂಬರಮೂರ್ತಿ ಮಹಾತ್ಮಾ। ಹೃದಯಾಂತರ ಸಂವರ್ತಿಚಿದಾತ್ಮಾ ॥೧॥
ಗುಣಗಳೆಣಿಕೆ ಪೋಣಿಕೆಗಳ ತಳೆವಾ। ಚಿನುಮಯೈಕರೂಪದ ಸಮಭಾವಾ ॥೨॥
ಓಂ ಕೇವಲ ನಾದಾಂತರ ಮುಖ ತಾ । ಅಂಕಿಸುತಿಹ ಜೀವಂತ ದೇವತಾ ॥೩॥
ಏಕಾನೇಕ ಮುಖಾ ಗುರು ಮುಖ್ಯಾ। ಶೋಕನಾಶ ಯೋಗೀಶ್ವರ ಸೌಖ್ಯಾ ॥೪॥

### ಪದ ೩

ಶ್ರೀಗುರು ದತ್ತಾತ್ರಯನ ಆರತಿ

ಕೃಷ್ಣಾ ಗಂಗಾ ಸಂಗಮದೊಳು ಮಾಡಿಪೆ ವಸ್ತಿ: ॥
ವಿಷ್ಣು ಶಂಕರ ಬ್ರಹ್ಮಾ ಸ್ವರೂಪ ಗುರುಮೂರ್ತಿ ॥
ತೃಷ್ಣಾ ಸಂಸೃತಿ ನಾಶಕ ಪ್ರಸಾದ ಸುಖಪೂರ್ತಿ ॥
ಕೃಷ್ಣಾಜಿನಧಾರಿ ಯತೀ ಮಾಳ್ಪರು ನಿಜಭಕ್ತಿ ॥೧॥
ಮಂಗಲಧಾಮಾ ಜಯ ಜಯ ದತ್ತಾತ್ರಯ ಗುರೋ ॥
ಸಂಗಮ ನಿಕಟೌದುಂಬರ ವಾಸೀ ಕಲ್ಪತರೋ ॥ಪಲ್ಲ॥

ಅರವತ್ತೊರುಷದ ಬಂಜೆಯು ಸುತನಂ ಪೆತ್ತಿಹಳು ||
ಸುರಿಸಿತು ಗೊಡ್ಡೆಮ್ಮೆಯು ಪಯಧಾರೆಯ ಹಗಲಿರುಳು ||
ವರವೇದಂಗಳು ಮುಖದಲಿ ಹೊರಟವು ಹೊಲೆಯನೊಳು ||
ಮರಣವ ಹೊಂದಿದ ವಿಪ್ರನು ಬದುಕಿದನವನಿಯೊಳು ||೨||

ಹೊಳೆಯಲ್ಲೂರಿದ ಟೊಣ್ಣೆಯೊಳೆಲೆಗಳು ಚಿಗುರಿದವು ||
ಕೊಳೆಯುವ ಕುಷ್ಟದ ಬ್ರಾಹ್ಮಣ ವಿಮಲಾಂಗದಿ ಚಲುವಂ ||
ಬೆಳೆ ಕೊಯ್ದಂಥಾ ರೈತನ ಹೊಲದೊಳು ಬಲು ಕಾಳೂ ||
ತಳೆದೆಂಟೂ ರೂಪಗಳಂ ದೀವಳಿಗೆಗೆ ಬರಲು ||೩||

ಭೋಗದ ಮನಸಿರುವಗಸಗೆ ರಾಜ್ಯದ ಸುಖಕೊಟ್ಟು ||
ಶ್ರೀಗಿರಿ ತೋರಿದೆ ಜೇಡಗೆ ಕ್ಷಣದೊಳಗೊಯ್ದಿಟ್ಟು ||
ರಾಗದಿ ಗಾಣಿಗಪುರದಲಿ ನಿಜ ಮಹಿಮೆಯ ಗುಟ್ಟು ||
ರಾಘವದಾಸಗೆ ತೋರಿದೆ ಬಲುಪರಿ ದಯವಿಟ್ಟು ||೪||

## ಪದ ೪

**ರಾಗ— ಮೋಹನಕಲ್ಯಾಣ** **ತಾಳ— ಧ್ರುವತಾಳಿ**

ಜಯ ಜಯ ಸದ್ಗುರುರಾಯಾ | ಜಯ ಜಯ ಭಕ್ತರ ಪ್ರೀಯಾ |
ಜಯ ಜಯ ದತ್ತಾತ್ರೇಯಾ | ಬೆಳಗುವೆನಾರತಿಯಾ ||ಪಲ್ಲ||

ನಿತ್ಯವು ನಿನ್ನನು ಸ್ಮರಿಸಿ | ಭಕ್ತಿ ಭಾವದಿ ಭಜಿಸಿ ||
ಮುಕ್ತಿಯು ಕೋರುವೆ ಜೀಯಾ | ದತ್ತ ಗುರುರಾಯಾ ||೧||

ದತ್ತದಿಗಂಬರಮೂರ್ತಿ | ಸುತ್ತಲು ನಿನ್ನಯ ಕೀರ್ತಿ ||
ಚಿತ್ತಕೆ ನೀಡೈ ಶಾಂತಿ | ಅತ್ರಿಯ ಪ್ರಿಯ ತನಯಾ ||೨||

ಗುರುವೆ ನಿನ್ನಯ ಮಹಿಮೆ | ಅರಿತು ಬಂದೆನು ಭರದೆ ||
ಕರುಣೆಯ ತೋರಿಸಿ ಪ್ರಭುವೆ | ತಾರಿಸು ಭವಮಾಯಾ ||೩||

ಚಿನ್ಮಯದಾ ರೂಪದಲಿ | ಎನ್ಮನದಾ ಮಧ್ಯದಲಿ ||
ಅನುದಿನವು ಸ್ಥಿರವಾಗಿ | ನೀನಿರು ಗುರುರಾಯಾ ||೪||

ಚಿತ್ತವ ನಿರ್ಮಲಗೊಳಿಸಿ | ಹೊತ್ತಿಸಿ ಪ್ರೇಮದ ಜ್ಯೋತಿ ||
ನಿತ್ಯ ನಿರಂಜನ ನಿನಗೆ | ಎತ್ತುವೆನಾರತಿಯಾ ||೫||

## ಪದ ೫

ಶ್ರೀಮತ್ ಸದ್ಗುರು ಪರಮಹಂಸ ಯತಿ ಸಮರ್ಥ ನರಸಿಂಹ ಸರಸ್ವತಿಯೋ। ನೇಮಿಸಿ ತಾ ಮೊದಲೆ ಬಂದು ಕ್ಷೇತ್ರ ಗಾಣಗಾಪುರದಲಿಯೋ॥ ಪ್ರೇಮ ಭಾವದಿಂದ ಬರುವ ದಾಸರಿಗೆ ಕಾಮ ಪೂರೈಸುವ ಈ ಧೊರೆಯೋ। ನಾಮ ತನ್ನದು ನೆನೆಯುವವರಿಗೆ ನಿಜಸುಖ ಕೊಡುವನು ಹರುಷದಿಯೋ ॥೧॥ ಮಂಗಲಾ ಜಯಮಂಗಲಾ। ಮಂಗಲದಾರತಿ ಗುರುವಿಗಿದೋ ಶುಭಮಂಗಲ ದಾರತಿ ದೇವಗಿದೋ ॥ಪಲ್ಲ॥ ದಿವ್ಯಪಾದುಕಾ ಸುವರ್ಣಮಯದವು ಚರಣ ಕಮಲದಲಿ ತೋರುವವೋ। ದೇವಾಸುರರು ಗಣಗಂಧರ್ವರು ಪೂಜಿಸುವಂಥಾ ಪಾದುಕವೋ॥ ಸೇವಿಸುವರು ತ್ರೈಮೂರ್ತಿಗಳಾದರು ಸದ್ಗುರುವಿನ ನಿಜ ಪಾದುಕವೋ॥ ಭವಮೋಚನಕಿದೆ ದರ್ಶನಾಗುವದು ಪಾದುಕಗಳೆ ಇವು ತಾರ ಕವೋ ॥೨॥ ವೇಷ ಎಂಥದು ಸ್ವಾಮಿದು ನೋಡಿದು ಚಾತುರ್ಥಾಶ್ರಮಕೊಪ್ಪು ವದೋ। ಕಾಷಾಯಾಂಬರ ಭೂಷಿತನಾಗಿ ದಂಡಕಮಂಡಲು ಧರಿಸಿಹನೋ॥ ಭಸ್ಮೋದ್ಧೂಲಿತ ಸರ್ವಾಂಗದಲಿ ಶೋಭಿಸುವಂಥಾ ದೇವಿವನೋ॥ ಭೂಷಣ ಕೆಲ್ಲಾ ರುದ್ರಾಕ್ಷವಿಡುವನು ಯೋಗಿರಾಜ ಮಹಾಪುರುಷಿವನೋ ॥೩॥ ಶ್ಯಾಮವರ್ಣ ಅತಿಸುಂದರ ಮೃದುತನು ಪೂರ್ಣಚಂದ್ರನಂಗ ಮುಖಕಳೆನೋ। ಕಮಲಾಕರಪ್ರಭು ಕಮಲನಯನ ಗುರು ನಾಸಿಕ ಸಂಪಿಗೆ ದಳಸಮನೋ॥ ಸುಮನಸಸರಗಳು ಜಾಜಿಮಲ್ಲಿಗಿವು ಕೊರಳೊಳಗೊಪ್ಪುವ ಪಹುಪರಿನೋ। ನೇಮದಿ ನಿತ್ಯ ಈ ಪರಿ ಧ್ಯಾನಿಸಿ ಮನದಲಿ ಪೂಜಿಸಬೇಕಿದನೋ ॥೪॥ ಕೇಶರಿ ಗಂಧವ ಹಣಿಮೇಲ್ಹಚ್ಚಿ ಕಸ್ತೂರಿ ಮೇಲ ತಿಲಕವನೋ। ಕುಸುಮ ಸೇವಂತಿಗೆ, ತುಲಸಿ, ಬಿಲ್ವದಳ ಏರಿಸುವರು ಗುರುಸ್ವಾಮಿಗಿದೋ। ಘೋಷಾ ಗುವದು ವೇದಮಂತ್ರಗಳ ಆರತಿ ಆದ ಅನಂತರನೋ। ಈಶಜಗದ್ಗುರು ಬಾಬಾ ರಾಮನ ರಕ್ಷಿಸುವನು ಬಹುಪರಿ ಇವನೋ ॥೫॥

## ಪದ ೬

ಆರತೀ ಶ್ರೀಗುರುರಾಯನಿಗೆ। ಆರತೀ ಸದ್ಗುರು ರಾಯನಿಗೆ
ವರಯತಿ ನರಹರಿ ಸರಸ್ವತಿಗೆ ॥ಪಲ್ಲ॥
ಬಳಲುತ ಉದರಶೂಲೆಯಿಂದ। ಬ್ರಾಹ್ಮಣ ಪ್ರಾಣ ಕೊಡಲು ಬಂದ।
ಕರೆಯುತಲವನ ಕರುಣದಿಂದ। ಕಳೆದರು ರೋಗವ ಜವದಿಂದ।

ಕಳ್ಳರು ದ್ರವ್ಯದಾಶೆಯಿಂದ । ಕೊಲ್ಲಲು ದ್ವಿಜನ ಕಪಟದಿಂದ ।
ತಾಪಸವರನ ವೇಷದಿಂದ । ಭಕ್ತನ ಬಳಿಗೆ ಭರದಿ ಬಂದ ।
ಬದುಕಿಸಿ ಪ್ರೀತಾ । ಶ್ರೀಗುರುನಾಥಾ । ತೋರಿದ ಚರಿತಾ
ವರಯತಿ ನರಹರಿ ಸರಸ್ವತಿಗೆ ॥ ೧ ॥

ಬರಡು ಕರೆಯಿತು ಕ್ಷೀರವನು । ಕೊರಡವು ಗಿಡದಾಕಾರವನು
ಪಡೆಯಿತು ಮಹಿಮೆಯಪಾರವನು । ನಿನ್ನದನರಿತದನಾರದನು
ಬೋಧಿಸಿ ವೇದದ ಸಾರವನು । ಬಿಡದಿರೆ ದ್ವಿಜರಹಂಕಾರವನು
ಹೊಲೆಯನ ಮುಖದಿಂ ವೇದವನು । ನುಡಿಯಿಸಿ ಇಳಿಸಿದಿ ಗರ್ವವನು
ಶ್ರೀ ಗುರುಮೂರ್ತಿ । ನಿರ್ಮಲ ಕೀರ್ತಿ । ಬೆಳಗುವೆನಾರತೀ
ವರಯತಿ ನರಹರಿ ಸರಸ್ವತಿಗೆ ॥೨॥

ಸತಿಯುಳ ಪತಿಶೋಕವ ನೋಡಿ । ಸಲಹಿದಿ ಸೌಭಾಗ್ಯವ ನೀಡಿ
ಮುಪ್ಪಿನ ಬಂಜೆಯು ನಿನ್ನ ಪಾಡಿ । ಸುಖಿಸಿದಳ್ ಸಂತತಿಯೊಡಗೂಡಿ
ಅಗಸನರಸನನು ನೀ ಮಾಡಿ । ಆತನ ವ್ರಣವನು ಸಲೆ ದೂಡಿ
ಪ್ರೇಮದಿ ಸದ್ಗತಿಯನು ನೀಡಿ । ಮಲಪಾತೀರಕೆ ದಯಮಾಡಿ
ಆರ್ತರ ನೋಡಿ । ನೀ ದಯಮಾಡಿ । ಕಡಿದೀ ಭವ ಬೇಡಿ
ಶ್ರೀಗುರುದಾಸನ ಕಾಪಾಡಿ ॥೩॥

## ಪದ ೭

ಸ್ವಾಮಿಾ ನೃಸಿಂಹ ಸರಸ್ವತೀಗೆ। ಗುರುಮೂರ್ತೀಗೆ। ಯತಿವರ್ಯಾಗೆ ಮಂಗಲ ।
ಕಾಮಿಾತ ಕಾಮಫಲ ತೃಪ್ತೀಗೆ ಮಂಗಲ ॥ಪಲ್ಲ॥
ನಿರುಪಮ ನಿತ್ಯ ನಿರುಮಾಯಾಗೆ ಮಂಗಲ । ನಿರ್ವಾ ಅವ್ಯಕ್ತ ಯತಿರಾಯಾಗೆ ಮಂಗಲ ॥೧॥ ಭಕ್ತಜನರ ಕಲ್ಪವೃಕ್ಷಾಗೆ ಮಂಗಲ । ಭಕ್ತಿಯಿಂದ ಭಜಿಪರ ಮೋಕ್ಷಾಗೆ ಮಂಗಲಂ ॥೨॥ ಭೀಮಾ ಗಂಧರ್ವ ಪುರವಾಸಾಗೆ ಮಂಗಲ । ಭೀಮಾ ಶಂಕರ ಗುರುವೇಷಾಗೆ ಮಂಗಲ ॥೩॥

## ಶ್ರೀ ನರಸಿಂಹ ಸರಸ್ವತಿ ಅಷ್ಟಕ

ಇಂದುಕೋಟಿ ತೇಜಕಿರಣ ಸಿಂಧು ಭಕ್ತವತ್ಸಲಂ ।
ನಂದನಾತ್ರಿಸೂನು ದತ್ತಮಿಂದಿರಾಕ್ಷ ಶ್ರೀಗುರುಂ ॥

ಗಂಧಮಾಲ್ಯ ಅಕ್ಷತಾದಿ ವೃಂದದೇವ ವಂದಿತಂ ।
ವಂದಯಾಮಿ ನಾರಸಿಂಹ ಸರಸ್ವತೀಶ ಪಾಹಿಮಾಂ ॥ ೧ ॥
ಮೋಹಪಾಶ ಅಂಧಕಾರ ಜಾತದೂರ ಭಾಸ್ಕರಂ ।
ಆಯತಾಕ್ಷಪಾಹಿ ಶ್ರೀಯು ವಲ್ಲಭೇಶ ನಾಯಕಂ ॥
ಸೇವ್ಯಭಕ್ತವೃಂದ ವರದ ಭೂಯೊ ಭೂಯೊ ನಮಾಮ್ಯಹಂ ॥
ವಂದಯಾಮಿ ॥ ೨ ।
ಚಿತ್ತಜಾದಿ ವರ್ಗಷಟ್ಕ ಮತ್ತವಾರುಣಾಂಕುಶಂ ।
ತತ್ವಸಾರ ಶೋಭಿತಾತ್ಮ ದತ್ತಶ್ರೀಯು ವಲ್ಲಭಂ ॥
ಉತ್ತಮಾವತಾರಭೂತ ಕರ್ತೃಭಕ್ತವತ್ಸಲಂ ॥ ವಂದಯಾಮಿ ॥ ೩ ॥
ವ್ಯೋಮ ವಾಯು–ತೇಜ ಆಪ ಭೂಮಿ ಕರ್ತೃ ಮೀಶ್ವರಂ ।
ಕಾಮಕ್ರೋಧ ಮೋಹರಹಿತ ಸೋಮ ಸೂರ್ಯ ಲೋಚನಂ ॥
ಕಾಮಿತಾರ್ಥ ದಾತೃಭಕ್ತ ಕಾಮಧೇನು ಶ್ರೀಗುರುಂ ॥
ವಂದಯಾಮಿ ॥ ೪ ॥
ಪುಂಡರೀಕ ಆಯತಾಕ್ಷ ಕುಂಡಲೇಂದು ತೇಜಸಂ ।
ಚಂಡದುರಿತ ಖಂಡನಾರ್ಥ ದಂಡಧಾರಿ ಶ್ರೀಗುರುಂ ॥
ಮಂಡಲೀಕ–ಮೌಲಿ ಮಾರ್ತಂಡ ಭಾಸಿತಾನನಂ ॥
ವಂದಯಾಮಿ ॥ ೫ ॥
ವೇದಶಾಸ್ತ್ರ ಸ್ತುತ್ಯ ಪಾದಮಾದಿ ಮೂರ್ತಿ ಶ್ರೀಗುರುಂ ।
ನಾದಬಿಂದು ಕಲಾತೀತ ಕಲ್ಪಪಾದ ಸೇವ್ಯಯುಂ ॥
ಸೇವ್ಯ ಭಕ್ತ ವೃಂದವರದ ಭೂಯೊ ಭೂಯೊ ನಮಾಮ್ಯಹಂ ॥
ವಂದಯಾಮಿ ॥ ೬ ॥
ಅಷ್ಟಯೋಗ ತತ್ವನಿಷ್ಠ ತುಷ್ಟಜ್ಞಾನ ವಾರಿಧಿಂ ।
ಕೃಷ್ಣವೇಣಿ ತೀರವಾಸ ಪಂಚನದ್ಯ ಸಂಗಮಂ ॥
ಕಷ್ಟದೈನ್ಯ ದೂರಭಕ್ತತುಷ್ಟ ಕಾಮ್ಯದಾಯಕಂ ॥
ವಂದಯಾಮಿಂ ॥ ೭ ॥
ನಾರಸಿಂಹ ಸರಸ್ವತೀಶ ನಾಮಮಷ್ಟ ಮೌಕ್ತಿಕಂ ।
ಹಾರಕೃತ್ಯ ಶಾರದೇನ ಗಂಗಾಧರಾಖ್ಯ ಸ್ವಾತ್ಮಜಂ ॥

ಧಾರಣೀಕ ದೇವದೀಕ್ಷ ಗುರೂವೂರ್ತಿ ತೋಷಿತಂ ।
ಪರಮಾತ್ಮಾನಂದ ಶ್ರೀಯಪುತ್ರ ಪೌತ್ರದಾಯಕಂ ॥
ವಂದಯಾಮಿ । ೮

ಸಾರಸಿಂಹ ಸರಸ್ವತೀಶ ಅಷ್ಟಕಂಚ ಯಃ ಪಠೇತ್ ।
ಘೋರ ಸಂಸಾರಸಿಂಧು ತಾರಣಾಖ್ಯ ಸಾಧನಂ ॥
ಸಾರಜ್ಞಾನ ದೀರ್ಘ ಆಯುರಾರೋಗ್ಯಾದಿ ಸಂಪದಾಂ ।
ಚಾರುವರ್ಗ ಕಾವ್ಯ ಲಾಭನಿತ್ಯ-ವೇವಯಃ ಪಠೇತ್ ॥
ವಂದಯಾಮಿ ॥ ೯ ।

## ಪ್ರಾರ್ಥನ

ಶಾಂತನಾಗು ಶ್ರೀ ಗುರುದತ್ತಾ । ಸಂತೈಸೀಗೆನ್ನಯ ಚಿತ್ತಾ ॥ ಪಲ್ಲ ॥
ನೀನೆನ್ನಯ ಮಾತಾಪಿತನು । ಎನ್ನಯ ನಿಜ ಹಿತಚಿಂತಕನು ॥
ಬಂಧುವು ಸ್ವಜನಾಪ್ತನು ನೀನು । ನೀನೆನ್ನಯ ಸಂರಕ್ಷಕನು ॥
ಭಯಕರ್ತನು ನೀಂ ಭಯಹರ್ತಾ ।
ದಂಡಧಾರಿ ನೀಂ ಪರಿಪಾತಾ ।
ನಿನ್ನನುಳಿದಿಲ್ಲನ್ಯ ವಾರ್ತಾ ।
ನೀನಾರ್ತರಿಗಾಶ್ರಯದಾತಾ । ಸಂತೈಸೀಗೆನ್ನಯ ಚಿತ್ತಾ ॥ ೧ ॥
ಅಪರಾಧಗಳಿಗೆ ಗುರುನಾಥಾ । ದಂಡವ ಪಿಡಿದಿರುವಿ ಯಥಾರ್ಥ ॥
ಪಾಡಿ ನಿನ್ನ ಮಂಗಲ ಚರಿತಾ । ಚರಣದಿ ಶಿರವಿಡುವೆವು ದತ್ತಾ ॥
ಮತ್ತೆಮ್ಮನು ದಂಡಿಸೆ ನೀನು ।
ನಿನ್ನನುಳಿದನ್ಯ ಜನರನ್ನು ।
ಬಿಡಿಸಲು ಕರೆಯುವದಾರನ್ನು ।
ಸಲಹುವರಾರೆಮ್ಮನು ದತ್ತಾ । ಸಂತೈಸೀಗೆನ್ನಯ ಚಿತ್ತಾ ॥ ೨ ॥
ತಾಳುತೆ ಕೋಪಿಯ ವೇಷವನು । ದಂಡಿಸೆ ಪಾಪಿಗಳಾವುದನು ।
ಮರೆದು ಮತ್ತೆ ಅಪರಾಧವನು । ಗೈಯಲು ಕ್ಷಮಿಸುವದೆಮ್ಮನ್ನು ॥
"ಗಚ್ಛತಃ ಸ್ಖಲನಂ ಕ್ವಾಪಿ" ।
ಎಂಬುದನ್ನೊಪ್ಪಿ ನೀಂ ಕೋಪಿ- ।

ಯಾಗದೆ ಕೃಪೆಮಾಡು ಪ್ರತಾಪಿ ।
ಪರಿಪಾಲಿಪುದೈ ಭಗವಂತಾ । ಸಂತೈಸೀಗೆನ್ನಯ ಚಿತ್ತಾ ॥ ೩ ॥

ತಾತ ನಿನ್ನ ಪದರಿನೊಳಿರಲು । ದಾರಿಯನು ಬಿಡಲು ಕಾಲುಗಳು ॥
ಸಹನದಿಂದ ತಿದ್ದಿ ದಾರಿಯೊಳು । ತರುವರಾರಿಲ್ಲ ಅನ್ಯರೊಳು ॥
ನಿಜಬಿರುದನು ಮನದೊಳು ತಂದು ।
ಪತಿತಪಾವನಾ ನೀನಿಂದು ।
ದತ್ತಾ ನೋಡೆಮ್ಮನು ಬಂದು ॥
ಕರುಣಾಘನ ನೀಂ ಗುರುನಾಥಾ । ಸಂತೈಸೀ ಗೆನ್ನಯಚಿತ್ತಾ ॥ ೪ ॥

ಸಹಕುಟುಂಬ ಸಹಪರಿವಾರ । ದಾಸರು ನಾವೀ ಮನೆಮಾರ ॥
ನಿನ್ನಡಿಗರ್ಪಿಸುವೆವ್ಯವನಾರ । ಸಂಸಾರದ ದುಃಖದ ಭಾರ ॥
ಪರಿಹರಿಸೈ ಕರುಣಾಸಿಂಧು ।
ನೀ ದೀನಾನಾಥರ ಬಂಧು ।
ತಟ್ಟದಿರಲೆಮಗೆ ಅಘಬಿಂದು ।
ವಾಸುದೇವ ಪ್ರಾರ್ಥಿತ ದತ್ತಾ । ದಾಸ ಯೋಗೀಶನಂತಸ್ಥಾ ॥ ೫ ॥

ದತ್ತಾತ್ರೇಯ ನಮೋಽಸ್ತುತೇ । ಭಗವತೇ ಪಾಪಕ್ಷಯಂ ಕುರ್ವತೇ ॥ ದಾರಿದ್ರ್ಯಂ ಹರತೇ ಭಯಂ ಶಮಯತೇ ಕಾರುಣ್ಯಮಾತನ್ವತೇ । ಭಕ್ತಾನುದ್ಧರತೇ ಶಿವಂ ಪ್ರದದತೇ ಸತ್ಕೀರ್ತಿಮಾತನ್ವತೆ । ಭೂತಾನ್ ದ್ರಾವಯತೇ ವರಂ ಚ ದದತೇ ಶ್ರೇಯಃ ಪತೇ ಸದ್ಗತೇ ॥

ಶ್ರೀಪಾದ ಶ್ರೀವಲ್ಲಭ ತ್ವಂ ಸದೈವ । ಶ್ರೀದತ್ತಾಸ್ಮಾನ್ ಪಾಹಿ ದೇವಾಧಿದೇವ ॥ ಭಾವಗ್ರಾಹ್ಯ ಕ್ಲೇಶಹಾರಿನ್ ಸುಕೀರ್ತೆ ॥ ಘೋರಾತ್ ಕಷ್ಟಾದುದ್ಧರಾಸ್ಮಾನ್ನಮಸ್ತೇ ॥೧॥ ತ್ವಂ ನೋ ಮಾತಾ ತ್ವಂ ಪಿತಾಪ್ತೋಧಿಪಸ್ತ್ವಂ । ತ್ರಾತಾ ಯೋಗಕ್ಷೇಮಕೃತ್ ಸದ್ಗುರುಸ್ತ್ವಂ ॥ ತ್ವಂ ಸರ್ವಸ್ವಂ ನೋ ಪ್ರಭೋ ವಿಶ್ವಮೂರ್ತೇ । ಘೋರಾತ್ ಕಷ್ಟಾದುದ್ಧರಾಸ್ಮಾನ್ನಮಸ್ತೆ ॥ ೨ ॥ ಪಾಪಂ ತಾಪಂ ವ್ಯಾಧಿಮಾಧಿಂ ಚ ದೈನ್ಯಂ । ಭೀತಿಂ ಕ್ಲೇಶಂ ತ್ವಂ ಹರಾಶು ತ್ವ ದನ್ಯಂ॥ ತ್ರಾತಾರನ್ನೋ ವೀಕ್ಷ್ಯ ಈಶಾಸ್ತ ಜೂರ್ತೇ । ಘೋರಾತ್ ಕಷ್ಟಾ ದುದ್ಧರಾನ್ಮಾನ್ನಮಸ್ತೆ ॥ ೩ ॥ ನಾನ್ಯಸ್ತ್ರಾತಾ ನಾಪಿ ದಾತಾ ನ ಭರ್ತಾ । ತ್ವತ್ತೋ ದೇವ ತ್ವಂ ಶರಣ್ಯೋಕ ಹರ್ತಾ ॥ ಕುರ್ವಾತ್ರೇಯಾನು

ಗ್ರಹಂ ಪೂರ್ಣರಾತೆ ॥ ಘೋರಾತ್ ಕಷ್ಟಾತ್....॥ ೪ ॥ ಧರ್ಮೇ ಪ್ರೀತಿಂ ಸನ್ಮತಿಂ ದೇವ ಭಕ್ತಿಂ । ಸತ್ಸಂಗಾಪ್ತಿಂ ದೇಹಿ ಭುಕ್ತಿಂ ಚ ಮುಕ್ತಿಂ ॥ ಭಾವಾಸಕ್ತಿಂ ಚಾಖಿ ಲಾನಂದಮೂರ್ತೇ। ಘೋರಾತ್ ಕಷ್ಟಾತ್........॥ ೫ ॥ ಶ್ಲೋಕಪಂಚಕ ಮೇತದ್ಯೋ ಲೋಕಮಂಗಲವರ್ಧನಂ ॥ ಪ್ರಪಠೇನ್ನಿಯತೋ ಭಕ್ತ್ಯಾ ಸ ಶ್ರೀದತ್ತಪ್ರಿಯೋ ಭವೇತ್ ॥ ೬ ॥

ಬ್ರಹ್ಮಾಮಹೇಶಾಚ್ಯುತರೂಪ ದತ್ತಾ । ತ್ರಿಮೂರ್ತಿ ನಿನ್ನಿಷ್ಟವೇ ಸರ್ವಸತ್ತಾ ॥ ದಾಸರ್ಗೆ ಸರ್ವಾರ್ಥವನೀವ ದಕ್ಷಾ । ನಿನ್ನಲ್ಲಿ ಒಟ್ಟಾಗಿವೆ ಭೋಗಮೋಕ್ಷಾ ॥೧॥ ಸದಾಸರ್ವದಾ ಆಗಲ್ಲೈ ನಿನ್ನ ಯೋಗ । ತನೂ ಆಗಲ್ಲೈ ನಿನ್ನ ಕಾರ್ಯೋಪಯೋಗ ॥ ಉಪೇಕ್ಷಿಸಲು ಬೇಡ್ವೈ ಸುಗುಣವಂತಾ ಶ್ರೀದತ್ತ । ಸದ್ಗುರುನಾಥಾ ಬೇಡಲಿನ್ನೇನು ಮತ್ತಾ ॥೨॥ ಉಪಾಸನೆಗೆ ದೃಢಭಾವ ಬೇಕು। ಭೂದೇವ ಸಂತರಿಗೆ ವಂದಿಸಲುಬೇಕು ॥ ಸತ್ಕರ್ಮದಲ್ಲಿಯೇ ದಿನಗಳೆಯಬೇಕು । ಯಾವಾಗಲೂ ಮಂಗಲವಾಡಬೇಕು ॥ ೩ ॥ ಎಲ್ಲೆಲ್ಲಿ ಹರಿದಾಡುವದೆನ್ನ ಮನವು । ಅಲ್ಲೆಲ್ಲ ಶ್ರೀಗುರುವೆ ನಿಜ ನಿನ್ನ ತನುವು ॥ ಎಲ್ಲೆಲ್ಲಿ ಮಸ್ತಕವ ನಿಡುವೆ ವಂದಿಸಲು ಅಲ್ಲೆಲ್ಲ ಸದ್ಗುರು ನಿನ್ನ ಶ್ರೀಪಾದಯುಗಲು ॥ ೪ ॥

## ತಾಂಬೂಲ ಸಮರ್ಪಣ

ವೀಳ್ಯವ ಕೊಳ್ಳಿರಿ ನರಹರಿ ದೇವಾ । ತೋರಿ ಮಾನವ ಸ್ವಭಾವಾ ॥
ತಾರಿಸಲಿಕ್ಕೆ ದೀನಜನವಾ । ತಾಳಿದಿರಿ ಯತಿರೂಪವಾ ॥ ೧ ॥

ಜ್ಞಾನವೆಂಬ ಅಡಿಕಿಪುಡಿ । ಭಕ್ತಿ ವಿಳೆದೆಲಿ ಮಾಡಿ । ವೈರಾಗ್ಯದ ಚೂರ್ಣ ಕೂಡಿ । ಸತ್ಕರ್ಮ ಲವಂಗದ ಜೋಡಿ ॥ ೨ ॥ ಪ್ರೇಮವೆಂಬ ಕಾಚು ಬಳಿದು । ಅಷ್ಟಭಾವದ ಯಾಲಕ್ಕಿ ಸುಲಿದು । ಕ್ರೋಧರಹಿತ ಜಾಜಿ ತೆಗೆದು ಸರ್ವಹಿತದ ಪತ್ರಿ ಮುರಿದು ॥ ೩ ಕ್ಷೇಮರೂಪವಾದ ಕೊಬ್ಬರಿ ದ್ವೈತ ಹೊಡೆದ ಬದಾಮು ನೋಡಿರಿ । ಮನೋಜಯ ವರಕು ಸವಿಯಿರಿ । ಶಾಂತಿಯೆಂಬ ಕಪ್ಪುರ ಕೊಳ್ಳಿರಿ ೪ ॥ ನಿರಹಂಕಾರ ಕಸ್ತೂರಿ ಸುಂದರ । ಸಿಕ್ಕಲಾರವು ಇಂತಹ ವಸ್ತು ರುಚಿಕರ । ಅದಕಾಗಿ ನಾನಾ ತವ ಕುವರ । ಮತ್ತೆ ಮತ್ತೆ ಕೊಡುವನು ಜೋಡಿಸಿ ಕರ ॥ ೫ ॥

—ಪ್ರೊ. ನಾರಾಯಣರಾವ ಕುಲಕರ್ಣಿ, ಧಾರವಾಡ

## ಶಯ್ಯಾ ಪದ ೧

ಮಹಾಸ್ವಾಮಿ ಸುಖದಿಂದ ನಿದ್ರೆಯ ಮಾಡಿರಿ ಅವಧೂತಾ
ನರಸಿಂಹ ಸರಸ್ವತಿ ಅವಧೂತ ||
ಚಿನ್ಮಯವಾದ ಮಂದಿರಕ್ಹೋಗಿ ಮಲಗಿರಿ ಏಕಾಂತ || ಪಲ್ಲ ||
ವೈರಾಗ್ಯದ ಕುಂಚದಿಂದ ಸ್ಥಳವನು ಗೂಡಿಸಿದೆ | ಗುರುವೆ ಸ್ಥಳವನು ಗೂಡಿಸಿದೆ
ಪ್ರೇಮರೂಪ ಪನ್ನೀರಿನ ಧಳಿಯನು ಹಾಕಿರುವೆ || ೧ ||
ಚರಣದಡಿಯಲಿ ಸುಂದರವಾದ ನವವಿಧಾ ಭಕ್ತಿ | ಹಾಕಿದೆ ನವವಿಧಾ ಭಕ್ತಿ
ಜ್ಞಾನವೆಂಬೋ ಸಮೆಯನು ಬೆಳಗಿ ಹಚ್ಚಿದೆ ಜ್ಯೋತಿ || ೨ ||
ನಿರ್ಮಲಭಾವದ ಮಂಚವನ್ನು ಹೃದಯದಿ ಹಾಕಿಹೆನು | ದೇವ ಹೃದಯದಿ ಹಾಕಿಹೆನು
ಮಾನಸಪುಷ್ಪಗಳಿಂದಲಿ ನಾನು ಹಾಸಿಗೆ ಮಾಡಿಹೆನು || ೩ ||
ದ್ವೈತವೆಂಬೋ ಬಾಗಿಲ ಮುಚ್ಚಿ ಒಂದು ಮಾಡಿಹೆನು | ದೇವಾ ಒಂದು ಮಾಡಿಹೆನು
ದುರ್ಬುದ್ಧಿಯ ಗಂಟನು ಬಿಚ್ಚಿ ಪರದೆ ಬಿಟ್ಟಿಹೆನು || ೪ ||
ಆಶಾತೃಷ್ಣಾ ಕಲ್ಪನೆಗಳನು ಹೊರಗೆ ಹಾಕಿಹೆನು | ದೇವಾ ಹೊರಗೆ ಾಕಿಹೆನು
ದಯಾಕ್ಷಮಾಶಾಂತೀ ಎಂಬೋ ದಾಸಿಯರಿಟ್ಟಿಹೆನು || ೫ ||
ಅಲಕ್ಷಉನ್ಮನಿಭಾವದ ಶೆಲ್ಲೆ ಸ್ವಾಮಿ ನೀನನಗೆ | ಗುರುವೆ ಶೆಲ್ಲೆ ನಿನಗೆ
ನಿರಂಜನ ಸದ್ಗುರು ಸ್ವಾಮಿ ಮಲಗುವ ಹಾಸಿಗೆಗೆ || ೬ ||

—ವೇ. ಯ. ರಾ. ಮಠದ, ಬಮ್ಮನಹಳ್ಳಿ

## ಶಯ್ಯಾರತಿ ಪದ ೨

ನರಸಿಂಹ ಸರಸ್ವತಿ | ಧರಿಸಿ ಮನದಲಿ ಪ್ರೀತಿ | ಭರದಿ ಬೆಳಗುವೆ ಶಯ್ಯಾರತಿ | ಸ್ವೀಕರಿಸು ಯತಿಪತಿ | ನರಸಿಂಹ ಸರಸ್ವತಿ |

ವಂದಿಸುತ ಬ್ರಹ್ಮದೇವನು | ಅಂದನ್ಯಾವ ಜೀವವನು | ಎಂದು ಜನಿಸುವದಿನ್ನು | ಸಂದೇಶವ ಕೊಡು ಇನ್ನು | ನೃಸಿಂಹ ಸರಸ್ವತಿ ||

ಹರಿಯು ತಾ ನಮಿಸುತ್ತ | ಕರಹ ಜೋಡಿಸಿ ಬೇಡುತ್ತಾ | ಪೊರೆಯುವ ದಾವ ಜೀವವೆನುತ | ಪರಿಪಾಲಿಪೆನೆಂದೆನುತಾ | ನೃಸಿಂಹ ಸರಸ್ವತಿ ||

ಬಂದನಾಗ ಮಹದೇವ । ವಂದಿಸುತ ಚರಣವ । ಜ್ಞಾನ ಕೊಡುವ ದ್ಯಾವ ಜೀವಾ । ಅಜ್ಞಾನಮಾಡು ಸ್ವಯಮೇವಾ । ನೃಸಿಂಹ ಸರಸ್ವತಿ ॥

ಮಾತೆಯೆಂದಳು ಬಾಳಾ ಇಂದು । ರಾತ್ರಿ ಬಹಳ ಆಯಿತೆಂದು । ಭಕ್ತರಕ್ಷಣೆಗೈದಿ ಇಂದು। ಶ್ರಮದಿ ನಿದ್ದೆ ಬಂದೀತೆಂದು। ನೃಸಿಂಹಸರಸ್ವತಿ॥ ಬೇಡುವ ಭಕ್ತವೃಂದ । ಕೊಡು ಸೇವೆ ಛಂದದಿಂದ । ನೀಡುವದು ಬ್ರಹ್ಮಾನಂದ । ಭೀಮಾಪುತ್ರ ನಂದಸ್ಕಂದ । ನೃಸಿಂಹ ಸರಸ್ವತಿ ॥

—ಅನುವಾದಕರು : ಶ್ರೀದತ್ತಭಕ್ತಮಂಡಳಿ, ಕುಕನೂರ

## ಶ್ರೀ ದತ್ತ ಅಪರಾಧ ಕ್ಷಮಾಪನಸ್ತೋತ್ರ

ಮಯಾ ಮಾತೃಗರ್ಭಸ್ಥಿತಿಪ್ರಾಪ್ತಕಷ್ಟಾತ್ ।
ಗೃಹೀತಂ ಕದಾಚಿನ್ನ ತೇ ನಾಮ ದತ್ತ ।
ಕ್ಷಮಸ್ವಾಪರಾಧಂ ಕ್ಷಮಸ್ವಾಪರಾಧಂ ।
ಕ್ಷಮಸ್ವಾಪರಾಧಂ ಪ್ರಭೋ ಕ್ಲಿನ್ನಚಿತ್ತ ॥ ೧ ॥

ಮಯಾ ಜಾತಮಾತ್ರೇಣ ಸಂಮೋಹಿತೇನ ।
ಗೃಹೀತಂ ಕದಾಚಿನ್ನ ತೇ ನಾಮ ದತ್ತ ।
ಕ್ಷಮಸ್ವಾಪರಾಧಂ...................... ।
......................ಪ್ರಭೋ ಕ್ಲಿನ್ನಚಿತ್ತ ॥ ೨ ॥

ಮಯಾ ಕ್ರೀಡನಾಸಕ್ತಚಿತ್ತೇನ ಬಾಲ್ಯೇ ।
ಗೃಹೀತಂ ಕದಾಚಿನ್ನ ತೇ ನಾಮ ದತ್ತ ।
ಕ್ಷಮಸ್ವಾಪರಾಧಂ...................... ।
......................ಪ್ರಭೋ ಕ್ಲಿನ್ನಚಿತ್ತ ॥ ೩ ॥

ಮಯಾ ಯೌವನೇಽಜ್ಞಾನತೋ ಭೋಗತೋಷಾತ್ ।
ಗೃಹೀತಂ ಕದಾಚಿನ್ನ ತೇ ನಾಮ ದತ್ತ ।
ಕ್ಷಮಸ್ವಾಪರಾಧಂ...................... ।
......................ಪ್ರಭೋ ಕ್ಲಿನ್ನಚಿತ್ತ ॥ ೪ ॥

ಮಯಾ ಸ್ಥಾಪಿರೇ ವಿಘ್ನಸರ್ವೇಂದ್ರಿಯೇಣ ।
ಗೃಹೀತಂ ಕದಾಚಿನ್ನ ತೇ ನಾಮ ದತ್ತ ।

ಕ್ಷಮಸ್ವಾಪರಾಧಂ,
ಪ್ರಭೋ ಕ್ಲಿನ್ನಚಿತ್ತ ॥ ೫ ॥

ಸ್ಮೃತೋ ಧ್ಯಾತ ಆವಾಹಿತೋಽಸ್ಯರ್ಚಿತೋ ವಾ ।
ನ ಗೀತಃ ಸ್ತುತೋ ವಂದಿತೋ ವಾ ನ ಜಪ್ತಃ ।
ಕ್ಷಮಸ್ವಾಪರಾಧಂ.......................... ।
.........................ಪ್ರಭೋ ಕ್ಲಿನ್ನಚಿತ್ತ ॥ ೬ ॥

— ಇತಿ ಅಪರಾಧಕ್ಷಮಾಪನ ಸ್ತೋತ್ರಂ ಸಂಪೂರ್ಣಂ —

## ಕ್ಷಮಾಯಾಚನೆ

ಅಪರಾಧಗಳನ್ನೆಲ್ಲಾ ಕ್ಷಮಿಸ್ಸೆ ಶ್ರೀಗುರುವೆ । ನೀ ಕ್ಷಮಿಸ್ಸೆ ಸದ್ಗುರುವೆ ॥
ಆಬದ್ಧ ಸುಬದ್ಧ ನಿನ್ನ ಗುಣಗಳ ಪೊಗಳಿರುವೆ ॥ಪಲ್ಲ॥
ತಾಳವೀಣೆ ಬಾರಿಸಿದೆನು ಮನಕೆ ಬಂದಂತೆ। ಗುರುವೆ ಮನಕೆ ಬಂದಂತೆ॥
ಅಸ್ತವ್ಯಸ್ತವಾದ ನಾದ ಹೊರಟಿತು ಸಿಕ್ಕಂತೆ ॥ ೧ ॥
ಇಲ್ಲವು ತಾಳಜ್ಞಾನ ಇಲ್ಲವು ಕಂಠ ಸುಸ್ವರ । ಗುರುವೆ ಕಂಠ ಸುಸ್ವರ
ಬಾಯಿಂದಾಗದೆ ಹೋಯಿತು ಶಬ್ದದ ಸರಿಯಾದುಚ್ಚಾರ ॥ ೨ ॥
ನಿರಂಜನನು ಹುಚ್ಚನಂತೆ ಬಿನ್ನಹ ಮಾಡುವನು । ಗುರುವೆ ಬಿನ್ನಹ ಮಾಡುವನು ।
ಸೇವಕನಲ್ಲಿ ಎಣಿಸಬಾರದು ಗೇಣದ ದೋಷವನು ॥ ೩ ॥

ಪ್ರೊ. ಎನ್. ಆರ್. ಕುಲಕರ್ಣಿ, ಧಾರವಾಡ

## ಶ್ರೀದತ್ತಾತ್ರೇಯನ ಜೋಗುಳ

### ಪದ ೧

ಜೋ ಜೋ ದತ್ತಾ ವರಮುಕ್ತಿದಾತಾ ॥ ಜೋ ಜೋ ॥ ಪಲ್ಲ ॥
ಭೂಸುರವರ ಅತ್ರೀಮುನಿ ಆಶ್ರಮದಿ ಬಂದು ।
ಭಾಸುರ ಸತಿ ಅನಸೂಯಾ ಗರ್ಭದಲಿ ನಿಂದು ॥
ಶ್ರೀಸುರತ್ರ್ಯಮೂರ್ತಿ ದತ್ತಾತ್ರೇಯನೆಂದು ।
ಮಾಸಮಧ್ಯದಿ ಜನಿಸಿದಿ ಗುರುವಾರವಂದು ॥ ಜೋ ಜೋ ॥ ೧ ॥

ಭೂಲೋಕದಿ ಭಗವಂತನೆ ದೀನರ ಉದ್ಧಾರ ।
ಆಲೋಚಿಸಿ ಮಾಡಿದಿ ಮುನಿಸದನದಿ ಅವತಾರ ॥
ಮೇಲಾಗಿ ದೇಶದೊಳು ಮಾಡುತ ಸಂಚಾರ ।
ಕೇಳಿ ತಿಳಿಸಿದಿ ವಿಷಯದ ನಿಜಸಾರಾ ॥ ಜೋ ಜೋ ॥ ೨ ॥

ಗುರುತರ ತಪನಾಚರಿಸಿ ಧರಿಸಿದಿ ಮುನಿರೂಪಾ ।
ದರುಶನದಿ ಕಳೆಯುವಿಯೊ ಜನತೆಯ ಕಡುತಾಪಾ ॥
ಸರಸದಿ ವೇದವನರುಹಿ ತೋರಿದಿ ನೀ ಕೃಪಾ ।
ಪರಮ ಭಕ್ತರ ಸಲಹುವ ನೀ ನರಹರಿ ಭೂಪಾ ॥ ಜೋ ಜೋ ॥ ೩ ॥

ಮೂರೂ ಮುಖಸಹಿತಾದರು ಆಕಾರರಹಿತಾ ।
ತೋರಿದರೂ ಜಗದೊಳಗೆ ನೀ ಮಾಯಾತೀತಾ ॥
ಆರೂ ವೈರಿಗಳನ್ನೇ ಮೀರಿದ ಅವಧೂತಾ ।
ತಾರಿಸುವಿ ಸಜ್ಜನರನು ಭಕ್ತಜನತ್ರಾತಾ ॥ ಜೋ ಜೋ ॥ ೪ ॥

ಮುಕ್ತಹೃದಯವನ್ನೇ ತೊಟ್ಟಿಲ ಮಾಡಿ ।
ಭಕ್ತಿ ಗುಣದಿಂದೆಳೆದು ತೂಗುವೆನೋ ಪಾಡಿ ॥
ಯುಕ್ತಿಯಿಂ ನಿಜಭಜಕರ ಭವಭಯವೀಡಾಡಿ ।
ಭಕ್ತವಾಯುಜನಂದದಿ ಹರಸೋ ಕಾಪಾಡಿ ॥ ಜೋ ಜೋ ॥ ೫ ॥

—ಹ. ರಾ. ದೇಸಾಯಿ, ಹಳೇಹುಬ್ಬಳ್ಳಿ

## ಜೋಗುಳ ಪದ ೨

ಜೋ ಜೋ ಜೋ ಜೋ ಜೋ ಅತ್ರಿಪುತ್ರಾ ॥
ನಿತ್ಯಬೋಧ ಸುಖ ಪರಿಪೂರ್ಣಗಾತ್ರಾ ॥ ಜೋ ಜೋ ॥ಪಲ್ಲ॥

ಜೋ ಜೋ ಸೃಜಿಸುವ ಬ್ರಹ್ಮಸ್ವರೂಪಾ ।
ಜೋ ಜೋ ಪಾಲಕ ವಿಷ್ಣುಸ್ವರೂಪಾ ॥
ಜೋ ಜೋ ಲಯಗೈವ ಶಂಕರರೂಪಾ ।
ಜೋ ಜೋ ವೇದಾದ್ಯಗೋಚರ ರೂಪಾ ಜೋ ಜೋ ॥ ೧ ॥

ಆರು ಮೂರ್ಕೈ ಮೊಗದಾತ್ಮಜ ಜೋ ಜೋ ।
ಚಾರು ಮಂದಹಾಸವಾನನ ಜೋ ಜೋ ॥

ಘೋರ ಪಾತಕನಾಶ ಸನ್ನಾಮ ಜೋ ಜೋ ।
ಭಾರೂಪದೆನ್ನ ಕಂದನೆ ನಿದ್ರೆ ಮಾಡೈ ಜೋ ಜೋ ॥ ೨ ॥

ಹರಿಯೆ ಜೋ ಶಿವನೆ ಜೋ ವಿಧಾತನೆ ಜೋ ಜೋ ।
ಪರನೆ ಜೋ ಜೋ ಕ್ಲೇಶಹರಣನೆ ಜೋ ಜೋ ॥
ಶರಣ ಜೋ ಜೋ ಲೋಕಭರಣನೆ ಜೋ ಜೋ ।
ವರ ದತ್ತಾತ್ರಯ ಲೋಕಗುರುರಾಜ ಮಲಗೈ ಲಾಲೀ ॥ ೩ ॥

ಜೋ ಜೋ ಕರ್ಮಠ ಭಕ್ತರಿಂ ಪೂಜ್ಯಾ ।
ಜೋ ಜೋ ಉಪಾಸಕ ಭಜಕರ ಧ್ಯೇಯಾ ॥
ಜೋ ಜೋ ಜ್ಞಾನಿಜನಾತ್ಮ ನಿರ್ಮಾಯಾ ।
ಜೋಜೋ ಶಿವಾನಂದ ಗುರು ಯೋಗಿರಾಯಾ ಜೋಜೋ ॥೪॥

## ಶ್ರೀಗುರು ದತ್ತಾತ್ರೇಯನ ಪಲ್ಲಕ್ಕಿ ಸೇವೆ.

**(ಶ್ರೀ ಸದ್ಗುರುನಾಥನಿಗೆ ಮಂಗಳಾರತಿ ಬೆಳಗಿ ಪಲ್ಲಕ್ಕಿಯಲ್ಲಿ ತಂದು ಕೂಡಿಸಿದ ಮೇಲೆ ಪ್ರದಕ್ಷಿಣ ಪ್ರಾರಂಭವು.)**

### ಧ್ಯಾನ

ಕಾಷಾಯವಸ್ತ್ರಂ ಕರದಂಡಧಾರಿಣಂ ಕಮಂಡಲುಂ ಪದ್ಮಕರೇಣ ಶಂಖಂ ॥
ಚಕ್ರಂಗದಾ ಭೂಷಿತಭೂಷಣಾಢ್ಯಂ ಶ್ರೀಪಾದರಾಜಂ ಶರಣಂ ಪ್ರಪದ್ಯೇ ॥ ೧ ॥
ಔದುಂಬರಃ ಕಲ್ಪವೃಕ್ಷಃ ಕಾಮಧೇನುಶ್ಚ ಸಂಗಮಃ ।
ಚಿಂತಾಮಣಿ ಗುರೋಃ ಪಾದೌ ದುರ್ಲಭೌ ಭುವನತ್ರಯೇ ॥ ೨ ॥
ಕೃತೆ ಜನಾರ್ದನೋ ದೇವಸ್ತ್ರೇತಾಯಾಂ ರಘುನಂದನಃ ।
ದ್ವಾಪರೆ ರಾಮ-ಕೃಷ್ಣೌ ಚ ಕಲೌ ಶ್ರೀಪಾದವಲ್ಲಭಃ ॥ ೩ ॥

### ಪ್ರದಕ್ಷಿಣ ನಮನ

ಧನ್ಯವೋ ಪ್ರದಕ್ಷಿಣಾ ಸದ್ಗುರು–ರಾಯನದು ।
ಧನ್ಯಾ ಧನ್ಯವೋ ಪ್ರದಕ್ಷಿಣಾ ಶ್ರೀಗುರುರಾಯನದು ॥ಪಲ್ಲ॥
ವಿಮಾನವಿಳಿಯಲು ದೇವತೆಗಳಿಗೆ ತ್ವರೆಯದು ಆಗಿಹುದು ॥ಅ. ಪ.॥

ಹೆಜ್ಜೆ ಹೆಜ್ಜೆಗೂ ಅಪಾರಪುಣ್ಯದ ರಾಶಿಯು ಲಭಿಸುವದು ।
ಕಾಶೀಕ್ಷೇತ್ರಾದ್ಯಖಿಲ ತೀರ್ಥಗಳ ಫಲವದು ಒದಗುವದು ॥ ೧ ॥
ಕೋಟಿಬ್ರಹ್ಮಹತ್ಯಾ ಹರಿಪುದು ಗೈಯಲು ನಮನವನು ।
ಮೋಕ್ಷವು ಪಾದದಲುರುಳಾಡುವದ್ಧೈ ಗೈ ಸಾಷ್ಟಾಂಗವನು ॥ ೨ ॥
ಮೃದಂಗತಾಳಗಳಿಂದಲಿ ಭಕ್ತರು ಭಾವದಿ ಪಾಡುವರು ।
ನಾಮ ಸಂಕೀರ್ತನೆಯಲಿ ನಿತ್ಯಾನಂದದಿ ನಲಿಯುವರು ॥ ೩ ॥
ಸದ್ಗುರು ಭಜನೆಯ ಮಹಿಮೆಯು ತಿಳಿಯದು ನಿಗಮಾಗಮಗಳಿಗೆ ।
ಅನುಭವವುಳ್ಳವರಭಿಲಾಷೆಗಳು ಸದ್ಗುರುಪದಗಳಿಗೆ ॥ ೪ ॥
ಭಾವದಿ ತುಂಬಿದ ದೇಹವ ಚರಣದಿ ಅರ್ಪಣ ಮಾಡಿಹೆನು ।
ಸದ್ಗುರು ದತ್ತಾತ್ರೇಯನು ಸಾಕ್ಷಾತ್ತೆದುರಿಗೆ ನಿಂತಿಹನು ॥ ೫ ॥

—ವೇ. ದತ್ತಂಭಟ್ಟ ಮಠದ, ಗುತ್ತಲ

**ಔದುಂಬರ ನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು**
**ದತ್ತರಾಜ ಮಹಾರಾಜ ಕೀ ಜೈ !**

## ಭಜನಾ

**ಕರುಣಾಸಾಗರ ಗುರು ದತ್ತಾ ।**
**ಶರಣಾಗತರ ಭಯಹರ್ತಾ ॥**

## ಮೊದಲನೆಯ ಪ್ರದಕ್ಷಿಣೆ ದಕ್ಷಿಣಕ್ಕೆ

### ಶ್ಲೋಕ

ಕಾವೀ ಬಟ್ಟೆಯನುಟ್ಟ ಕೋಮಲತನೂ ಪಾದಂಗಳೋಳ್ ಪಾದುಕಾ
ಕೈಗಳ್ಗೊಪ್ಪಿರೆ ಶಂಖಚಕ್ರಡಮರೂಶೂಲಂಗಳಾ ಮಾಲಿಕಾ
ಗಂಭೀರಾ ಮುಖಮಂಡಲಾ ಜಡೆಗಳಿಂ ರಾರಾಜಿಪಾ ಮಸ್ತಕಾ
ದತ್ತಾತ್ರೇಯನ ಚಿಂತಿಸೆನ್ನ ಮನಸೇ ಈ ಧ್ಯಾನವೇ ತಾರಕಾ ॥ ೧ ॥
ಶ್ರೀಪಾದಾ ನರಸಿಂಹಸ್ವಾಮಿ ವರದಾ ರೆಂದಾಗಿ ಭೂಮಂಡಲಾ ।
ಸುತ್ತೀ ಮುತ್ತಿದವರ್ಗೆ ಭುಕುತಿ ಮುಕುತಿ ಕೈಯೆತ್ತಿ ಬಿತ್ತಿದ್ದೆಲಾ ॥
ನೀ ಜೀವಂತ ದಿಗಂತದಂತ ಮೆರೆವಾ ಮಾಹಾತ್ಮ್ಯವೇನಕ್ಕಜಾ ।
ಬಾ ಯೋಗೀಶ್ವರ ಪೂರ್ವಜಾ ಗುರುಕುಲಾಂಭೋಜಾ ನಮೋ ಅತ್ರಿಜಾ ॥ ೨ ॥

## ಪದ

ರಾಗ:— ಕಾನಡಾ ತಾಳ:— ತ್ರಿವಟ

ನೋಡ್ವೆ ಗುರುವಿನಾನಂದದ ಶೋಭಾ । ಬೇಡ್ವೆ ಮಾನವಜನುಮದ ಲಾಭ ॥ ಪಲ್ಲ ॥ ಧರೆಯೊಳು ನಾಮಾಂಕಿತಜಗಪಾಲಾ । ಕೊರಳೊಳು ಧರಿಸಿಹ ವರವನಮಾಲಾ ॥ ಶಿರದೊಳು ಜಟೆಯನು ಕರುಣಾಶೀಲಾ । ಕರದೊಳು ದುರಿತವ ತರಿಯುವ ಶೂಲಾ ॥ ೧ ॥ ದತ್ತ ದೇವಋಷಿ ಅತ್ರಿಕುಮಾರಾ । ಹೊತ್ತಿಹ ಹರುಷದಿ ಭಕ್ತರ ಭಾರಾ ॥ ಮತ್ತೆ ತ್ರಿಮುಖನೀ- । ತ ನಿರಾಕಾರಾ । ಉತ್ತಮವಾದೀತನ ಶೃಂಗಾರಾ ॥ ೨ ॥ ಸುರಪತಿ ತಾ ನಿಜಭಜಕರ ದಾಸಾ । ವರಯತಿ ಪಾಪಿಗೆ ನರನೋಲ್ ಭಾಸಾ ॥ ಕುರುಪುರದಲಿ ಮಾಡಿರುವನು ವಾಸಾ । ಭರತಭುವನ ಮಾಡುತ ಕೈಲಾಸಾ ॥ ೩ ॥

—ಶ್ರೀ. ಹ. ರಾ. ದೇಸಾಯಿ, ಹಳೇಹುಬ್ಬಳ್ಳಿ

**ಔದುಂಬರ ನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ**
**ಸದ್ಗುರು ದತ್ತರಾಜ ಮಹಾರಾಜಕೀ ಜೈ !**

## ಭಜನಾ

**ಭಜಕರ ಭಕ್ತಿಗೆ ಒಲಿವಾತಾ ।**
**ನಿಜಸುಖದಾಯಕ ಗುರುನಾಥಾ ॥**

### ಮೊದಲನೆಯ ಪ್ರದಕ್ಷಿಣೆ ಪಕ್ಷಿಮುಕ್ಕೆ

ಅಂದಾ ಆಪಳ ರಾಜನಲ್ಲಿ ಜನಿಸೀ ತಮ್ಮಂದಿರಂ ನಿಲ್ಲಿಸಿ ।
ಗೋಕರ್ಣಾದಿ ಸಮಸ್ತ ತೀರ್ಥ ಬಳಸಿ ಬಂದಾ ಮಹಾತಾಪಸೀ ॥
ತಾನೇ ಹುಟ್ಟುವೆನೆಂದನಾ ದ್ವಿಜಸತೀ ಮಾತನ್ನು ವಿಶ್ವಾಸಿಸೀ ।
ಮತ್ತೂ ಬಪ್ಪೆನು ನಿಚ್ಚವೆಂದು ನಡೆದ ಅಂದೇ ಗುರುದ್ವಾದಶಿ ॥ ೩ ॥
ಸುತ್ತೂ ನಿತ್ಯ ಪ್ರದಕ್ಷಿಣಾ ತಿರುಗುವಾ ಕೃಷ್ಣಾನದಿ ಸಂಭ್ರಮಾ ।
ಕುರುಗಡ್ಡೀ ಬಲುಶಾಂತಿ ಸಿದ್ಧಿ ಸುರಿವಾ ಏಕಾಂತ ಪುಣ್ಯಾಶ್ರಮಾ ॥
ಅಗಸಂಗಿಲ್ಲ ವರಪ್ರದಾನ ದ್ವಿಜನಾ ಮಡ್ಡಂಗೆ ವಿದ್ಯಾಪ್ರಭಾ ।
ಭಕ್ತೋದ್ಧಾರಕ ಬ್ರಹ್ಮಚಾರಿ ಸುಲಭಾ ಶ್ರೀಪಾದ ಶ್ರೀವಲ್ಲಭಾ ॥ ೪ ॥

## ಪದ

ರಾಗ— ವಸಂತ ತಾಳ— ತ್ರಿತಾಳ

ರಮ್ಯವತೀ ಗುರುಮೂರ್ತಿ ॥ ಶ್ರೀಪತಿ ॥ ಪಲ್ಲ ॥
ಕಾಷಾಯಾಂಬರ ವೇಷಮನೋಹರ । ಶೇಷಶಯನನವತಾರ ॥ ಶ್ರೀಪತಿ ॥ ೧ ॥
ಧ್ಯಾನಸುಲಭ ಗಲಗಾನವು ಕೋಮಲ । ಆನತಕರುಣಾಶೀಲ ॥ ಶ್ರೀಪತಿ ॥ ೨ ॥
ಶ್ಯಾಮ ಸುಮಂಗಲಧಾಮ ಪರಮ ಬಲ । ಭೀಮಸಮ ಭಜಕಪಾಲ
॥ ಶ್ರೀಪತಿ ॥ ೩ ॥

—ಶ್ರೀ. ಹ. ರಾ. ದೇಸಾಯಿ, ಹಳೇಹುಬ್ಬಳ್ಳಿ.

ಔದುಂಬರನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು
ದತ್ತರಾಜ ಮಹಾರಾಜಕೀ ಜೈ !

## ಭಜನಾ

ಕರುಣಾಸಾಗರ ಗುರುಮೂರ್ತಿ ।
ಚರಣದಿ ನೀಡೈ ನಿಜಭಕ್ತಿ ॥

## ಮೊದಲನೆಯ ಪ್ರದಕ್ಷಿಣೆ ಉತ್ತರಕ್ಕೆ

ಅಂಬಾಮಾಧವ ಪುತ್ರನಾಗಿ ಬೆಳದೀ ಲೀಲಾ ಬಹು ತೋರಿದೀ ।
ಕಾಶೀಕ್ಷೇತ್ರವ ಸೇರಿ ಕೃಷ್ಣಯತಿಯೊಳ್ ಸನ್ಯಾಸವಂ ಪೊಂದಿದಿ ॥
ಶಿಕ್ಷಾರಕ್ಷೆ ಸಮರ್ಥ ಸದ್ಗುರುವು ನೀ ಸತ್‌ಸಂಪ್ರದಾಯಾಗ್ರಣೀ ।
ಸ್ವಾಮಿ ಶ್ರೀ ನರಹರಿ ಸರಸ್ವತಿ ಗುಣೀ ಸಂಸಾರಸಂತಾರಿಣೀ ॥ ೫ ॥
ಚಾತುರ್ಮಾಸ್ಯದ ವಸ್ತಿಯಾಯಿತು ಮಹಾ ಔದುಂಬರಚ್ಛಾಯೆಯೋಳ್ ।
ಶ್ರೀದೇವಿ ಭುವನೇಶ್ವರೀ ಎದುರಿನೋಳ್ ಕೃಷ್ಣಾನದೀ ದಂಡೆಯೋಳ್ ॥
ಬಂದಾ ಸದ್ಗುರು ದ್ರೋಹಿಯನ್ನು ತಿಳಿಸೀ ಸಂತೈಸಿ ಅತ್ಯಾದರಾ ।
ಲೋಕಾನುಗ್ರಹಕಾಗಿ ನಿಂತನೆಲೆ ಶ್ರೀಕ್ಷೇತ್ರ ಔದುಂಬರಾ ॥ ೬ ॥

## ಪದ

(ಸಿನೇಮಾ ಧಾಟಿ:— ಯಮುನಾಜಳೀ ಖೇಳ ಕನ್ನಯಾ)

ಅತಿಸುಂದರ ಲೀಲೆ ಶ್ರೀಗುರು ತೋರುವನೂ ಸಂತತಾ ॥
ಕ್ಷಿತಿಯಲ್ಲಿ ನಾನಾ ಜನತಾ । ಅತಿ ಪಾವನವ ಮಾಡುತ್ತಾ । ಗತಿ ನೀಡುವ
ನೀತಾ । ಜಾತಿಪಂಥ ನೋಡನ್ನೈ ತಾ । ಭಕುತಿ ಕಂಡೂ ಒಲಿವ ಮಾತ್ರ ।

ಸುಶೀಲಾ । ಅತಿಕೋಮಲ ಹೃದಯಿಯು ಕ್ಲೇಶವ ಕಳೆಯುತಲೀ ಸಲಹುತಾ ॥ ೧ ॥ ಬರಡೆಮ್ಮೆಯಾ ಹಿಂಡಿಸಿದಾ । ಬರಿಕಾಷ್ಠ ಗಡ ಚಿಗುರಿಸಿದಾ । ಶರಣಾಳಿಯ ಮನದಾ । ಸರ್ವಬಯಕೆ ಪೂರ್ತಿಗೈದಾ । ಕರುಣ ಜನನೀಯಂತೆ ಕಾದಾ । ವಿಧಾತಾ । ಹರಿ ಈಶ್ವರರೂಪಿಯು ತಾನೆಯೇ ಅನಿಸುತಲೀ ಮೆರೆಯುತಾ ॥ ೨ ॥ ಉರಿ ಭೂತಗಳ ಆಬಾಧಾ । ವಳಿ ಓಡಿಸುವನು ಆಗಾಧಾ । ಇರುವಂಥ ವಿಷಾದಾ । ದೂರಮಾಡಿ ಕೊಡುವ ಮೋದಾ । ತೋರುತಿರುವಾ ಬಲು ವಿನೋದಾ । ವಿಶಾಲಾ । ಸಿರಿ ಗಾಣಗಪುರದಲಿ ಪ್ರೇಮದಿ ವಾಸಿಸುತಾ ದಯದಿ ತಾ ॥ ೩ ॥

— ಶ್ರೀ. ರಾ. ಹ. ದೇಸಾಯಿ, ಹಳೆಹುಬ್ಬಳ್ಳಿ.

**ಔದುಂಬರನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು**
**ದತ್ತರಾಜ ಮಹಾರಾಜಕೀ ಜೈ !**

## ಭಜನಾ

**ಗುರುವಿನ ಭಜನೆಯು ಭವತರಣಾ ।**
**ತೋರುವ ತ್ವರಿತದಿ ಗುರು ಕರುಣಾ ॥**

## ಗುಡಿಯು ಸಮ್ಮುಖ-ಪೂರ್ವಕ್ಕೆ

ಕೃಷ್ಣಾವೇಣಿಯು ಪಂಚಗಂಗೆಗಳದೀ ಸರ್ವೋತ್ತಮಾ ಸಂಗಮಾ ।
ಭೂತಪ್ರೇತ ಪಿಶಾಚ ಬಾಧೆಗಳಿಗೀ ಸ್ಥಾನಾ ಅತೀ ಉತ್ತಮಾ ॥
ಸ್ವಾಮಿ ಶ್ರೀನರಸಿಂಹ ದೇಶಿಕರದಾ ವಾಸ್ತವ್ಯ ಕೀರ್ತೀಗುಡಿ ।
ಕೃಷ್ಣಾತೀರದ ವಾಡಿ ಇಲ್ಲಿಯ ಹುಡಿ ಶ್ರೀಪಾದ ಮೂಡೀ ಮಡಿ ॥ ೭ ॥
ಆ ಪಾತಾಳದ ಯೋಗಿನೀಜನಗಳಿಂ ಸತ್ಕಾರವಾದ್ದಿಲ್ಲಿಯೇ ।
ಬಡವರ್ಗಾಯ್ತು ನಿಧಾನ ಸತ್ತ ಮಗುವೂ ಸಂಜೀವಿನೀಸಿದ್ಧಿಯೇ
ಹಾದೀಕಾಯುತಲಿದ್ದ ಯೋಗಿವರನಾ ಸಂತೈಸಿದಾ ಮನ್ನಿಸಿ ।
ಕೃಷ್ಣಾತೀರನಿವಾಸಿ ಭಕ್ತ ಹೃದಯಾಂತರ್ವಾಸೀ ವಾಸೀವಶೀ ॥ ೮ ॥

## ಪದ

ಮಾಡಿರೈ ಪ್ರದಕ್ಷಿಣೇಯಾ ಸದ್ಗುರುರಾಯನಿಗೆ ।
ಪಾಡುತ ಮಾಡಿರೈ ಪ್ರದಕ್ಷಿಣೇಯಾ ಶ್ರೀಗುರುರಾಯನಿಗೆ ॥ ಪಲ್ಲ ॥

ಬೇಡಿದ ವರಗಳ ನೀಡಲು ಬಂದಿಹ ನರಹರಿರೂಪನಿಗೆ || ಅ.ಪಲ್ಲ ||

ದಂಡ ಕಮಂಡಲು ಶಂಖ–ಚಕ್ರಧರ ಜ್ಞಾನಶೌಂಡ ಗುರುಗೆ ||
ಚಂಡಕಿರಣ ಮಾರ್ತಾಂಡತೇಜ ಗುರುಮಂಡಿತ ದೇವನಿಗೆ || ೧ ||

ವರ ಔದುಂಬರ ತರುತಲವಾಸಗೆ ನಿಗಮಾತೀತನಿಗೆ ||
ಸುರಪತಿಕರುಣಾ ಮೂರುತಿಗೆ ಸತಿ ಅನಸೂಯಾಸುತಗೆ || ೨ ||

ಮೂರು ಪ್ರದಕ್ಷಿಣೆ ನೂರು ಜನುಮದ ಪಾತಕ ನಾಶಿಪುದು ||
ಸಾರಲೇನು ನಿಜ ಜನನ ಮರಣದ ಬೇರನು ಕೀಳುವದು || ೩ ||

—ಶ್ರೀ. ಹ. ರಾ. ದೇಸಾಯಿ, ಹಳೇಹುಬ್ಬಳ್ಳಿ

**ಔದುಂಬರನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು**
**ದತ್ತರಾಜ ಮಹಾರಾಜಕೀ ಜೈ !**

## ಭಜನ

**ಅನಸೂಯಾಸುತ ಗುರುದತ್ತಾ ।**
**ಮನಸಿಗೆ ಶಾಂತಿಯು ಕೊಡುವಾತಾ ||**

## ಎರಡನೆಯ ಪ್ರದಕ್ಷಿಣೆ ದಕ್ಷಿಣಕ್ಕೆ

ಪ್ರಾತಃಕಾಲದಿ ಮಿಂದು ಮಾಡುವ ಮಹಾನುಷ್ಠಾನದಾ ದಿಕ್ಕಟಾ ।
ಅಶ್ವತ್ಥಾ ಗುರುಪಾದುಕಾಗುಡಿ ಶಿವಸ್ಥಾನಾ ಬಹೂಕರ್ಮಠಾ ||
ಭೀಮಾಮರ್ಜಿಯ ಸಂಗಮಸ್ಥಳ ಮಹಾಸ್ಥಾನಾ ಬಹೂಪಾವನಾ ।
ದತ್ತಾತ್ರೇಯ ನೃಸಿಂಹ ಸ್ವಾಮಿಚರಣಾ ಕೊಂಡಾಡು
ಧನ್ಯಾ ಮನಾ || ೯ ||

ಸುತ್ತೂ ಸುಂದರ ಪೌಳಿ ಮಧ್ಯದೊಳಗಾ ಚೊಕ್ಕಾದ ಚಿಕ್ಕಾ ಮಠ ।
ಇಲ್ಲೇ ರಾಕ್ಷಸಗಾಯ್ತು ದರ್ಶನ ಮಹಾ ಅಶ್ವತ್ಥವಿತ್ತೋ ದಿಟ ||
ಒಳಗೀ ಪಕ್ಕದ ಖಿಂಡಿ ಮುಂದೆ ಬಲಕಾ ಚಿಂತಾಮಣೀನಾಯಕಾ ।
ಇತ್ತೀ ಮಂಟಪ ನೋಡಿದೋ ಇವುಗಳೇ ಶ್ರೀನಿರ್ಗುಣಾ
ಪಾದುಕಾ || ೧೦ ||

## ಪದ

ರಾಗಃ— ಭೈರವಿ ತಾಳ:— ದೀಪಚಂದಿ

ದತ್ತಾ ಅವಧೂತಾ ಬಾ ಪಾಲಿಸು ॥ ಪಲ್ಲ ॥
ಎತ್ತ ಪೋಗುವೆನತ್ತ । ಸುತ್ತೀ ಬರುವ ಬಹು ।
ಕುತ್ತುಗಳನು ಸಹಿ । ಸುತ್ತೇ ಬೇಸತ್ತೇ ॥ ಅ. ಪ. ॥

ನೊಂದೆನೊ ಭವತಾಪ । ದಿಂದೇ ದಯಾಳೋ ।
ಎಂದೀ ಕರ್ಮದ ಪಾಶ । ದಿಂದೆನ್ನ ಬಿಡಿಸುವಿ ॥ ೧ ॥

ಗೊತ್ತಿಲ್ಲೆನಗೆ ಯೋಗ । ಭಕ್ತಿಜ್ಞಾನಗಳಾವು ।
ಆರ್ತಭಕ್ತನು ನಾ ವಿ । ಪತ್ತಿಯೊಳ್ ಭಜಿಪೆ ॥ ೨ ॥

ನೀನರಿಯುವಿ ಎನ್ನ । ಹೀನ ಕರ್ಮವನೆಲ್ಲ ।
ದೀನಬಂಧುವೆ ಭಕ್ತ । ಮಾನಾಭಿಮಾನಿ ॥ ೩ ॥

ಪಾಮರನೋ ನಾನು । ಪ್ರೇಮದ ಕೊಳವೆಂದು ।
ಕಾಮ ಕೊಳಚಿಯೊಳು । ಧುಮುಕಿ ಮರುಗುವೆ ॥ ೪ ॥

ಪತಿತನಾದೆನಗೇನು । ಗತಿ ಬಾ ದಯಾಳೋ ॥
ನುತಿಪೆ ಶಿವಾನಂದ । ಸುತನಾಪ್ತದೇವಾ ॥ ೫ ॥

**ಔದುಂಬರನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು ದತ್ತರಾಜಮಹಾರಾಜಕೀ ಜೈ !**

## ಭಜನ

**ದತ್ತದಿಗಂಬರ ಗುರುದೇವಾ ।
ನಿತ್ಯದಿ ಹೃದಯದಿ ನೆಲೆಸಿರುವಾ ॥**

## ಎರಡನೆಯ ಪ್ರದಕ್ಷಿಣೆ ಪಶ್ಚಿಮಕ್ಕೆ

ಕಂಡಾಸ್ವಾಮಿ ತ್ರಿವಿಕ್ರಮಾ ಅನುಪಮಾ ವಿಶ್ವಾತ್ಮರೂಪೋತ್ತಮಾ ।
ಅಸ್ಪೃಶ್ಯಾದ್ವಿಜನಂತೆ ನಿಂತು ನುಡಿದಾ ವೇದಾರ್ಥ ಸರ್ವಸ್ವಮಾ ॥
ಮಿಂದಾಭೀಮೆಯ ಅಷ್ಟ ತೀರ್ಥಗಳೊಳೂ ರತ್ನಾಯಿ ಶುದ್ಧಾದಳೂ ।
ಭಕ್ತರ್ಗೀತ ಕೃಪಾಳು ಜ್ಞಾನಿಗಳೊಳೂ ಮುಂದಾಳು ಯಾವಾಗಲೂ ॥ ೧೧

ಅಂದಾ ಭಾಸ್ಕರಭಟ್ಟ ಸನ್ನಿಧಿಯಲೀ ಗೈದಾ ಸಮಾರಾಧನಾ ॥
ಎಂಥಾ ಅದ್ಭುತವಾಯ್ತು ಮೂವರಡಿಗೀ ಊರೆಲ್ಲ ಉಂಡಿತ್ತಣಾ ॥
ಅತ್ಯಲ್ಪಾ ನಿಜಭಾವಕಾಗಿ ಒಲಿದೂ ಮೇಲಾಗಿ ತಾನೇ ಋಣೀ ।
ಆಗಾಣೂರಧಣೀ ಕೃಪಾಗುಣಖಣೀ ಭಕ್ತರ್ಗೆ ಚಿಂತಾಮಣಿ ॥ ೧೨ ॥

## ಪದ

( ಧಾಟಿ:— ತುಮಬಿನ ಹಮರೀ ಕೌನ ಖಬರಲೇ )

ದುಡುಕಲೆ ಜೀವಾ ಬೇಡಿದ ಕೊಡುವಾ ॥
ವಾಡಿಯ ಸದ್ಗುರು ದೇವಾ ॥ಪಲ್ಲ॥

ಬಾಳಿನುರಿಗೆ ಬಲಿಗೊಡನೋ ಭಜಕರ । ಬಳಲಿಸನೋ ಸಂರಕ್ಷಿಸುವಾ ॥
ತಿಳಿದು ಮನೋದಯ ಒಳಿತನೆ ನೀಡುವ । ಸುಲಭದಿ ಸೇವಕ ಜನಕೊಲಿವ ॥
ತೊಲಗದಲೆಲ್ಲರ ಬಳಿಯೆ ಬೆಳಗುವಾ । ಒಳಹೊರಗೂ ಬಲು ಚಲುವಾ ॥
ವಾಡಿಯ ಸದ್ಗುರುದೇವಾ ॥ ೧ ॥

ಜಗತರಂಗಗಳಿಗೀತ ಮಹಾರ್ಣವ । ಬಗೆದೊಡಿದೇ ಸರ್ವಾನುಭವಾ ॥
ಹೊಗಳುವದೇನೂ ಭಾವಿಕಭಾವಾ । ಮಿಗಿಲೆನಿಸುತೆ ಬೆಂಬಳಿಗಿರುವಾ ॥
ಭೋಗಮೋಕ್ಷಗಳ ರಾಗ ತಣಿಸುವಾ । ಯೋಗೀಶ್ವರ ಸರ್ವಸ್ವಾ ॥
ವಾಡಿಯ ಸದ್ಗುರುದೇವಾ ॥ ೨ ॥

**ಔದುಂಬರ ನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು**
**ದತ್ತರಾಜಮಹಾರಾಜ ಕೀ ಜೈ !**

## ಭಜನ

**ನಿತ್ಯಾನಂದ ಗುರುಮೂರ್ತಿ ।**
**ಚಿತ್ತಕೆ ನೀಡೈ ನಿಜಶಾಂತಿ ॥**

## ಎರಡನೆಯ ಪ್ರದಕ್ಷಿಣೆ ಉತ್ತರಕ್ಕೆ

ಏನಾತಂತುಕ ಧನ್ಯ ಸದ್ಗುರುವಿನಾ ಸಂಗಾತ ಮಾತಾಡಿದಾ ।
ಶ್ರೀಶೈಲಾದಿ ಸಮಸ್ತ ತೀರ್ಥಗಳನೂ ಸಂಗಾತವೇ ನೋಡಿದಾ ॥
ಶೂದ್ರಾ ಕೊಯ್ಸಿದ ಮಾತಿಗಾಗಿ ಬೆಳೆಯಾ ಶ್ರದ್ಧಾಳು ಬದ್ಧಾದಲಾ ।
ಭಕ್ತರ್ಗೀತ ಕೃಪಾಕರಾ ಸುರವರಾ ನರಸಿಂಹ ಯೋಗೀಶ್ವರಾ ॥ ೧೩ ॥

ಸಾಯಂವೇವನ ಸೇವೆ ನಂದಿದ್ವಿಜನಾ ನಿಷ್ಠಾ ಬಲಿಷ್ಠಾ ಧೃತೀ ।
ಸಾವಿತ್ರೀ ಪತಿಭಕ್ತಿ ವೃದ್ಧಸತಿಯಾ ನಿತ್ಯಾರತೀ ಆರತೀ ॥
ಶ್ರದ್ಧಾ ಭಾಸ್ಕರನಲ್ಲಿ ಪ್ರೀತಿ ನೃಪನೋಳ್ ವಿಶ್ವಾಸವಾ ಶೂದ್ರನೋಳ್
ಭಕ್ತೀ ತಂತುಕನಲ್ಲಿ ಸದ್ಗುರುವಿನಾ ಸದ್ಭಕ್ತಿಗಾದರ್ಶಗಳ್ ॥ ೧೪ ॥

## ಪದ

ರಾಗ—ಪೀಲು ತಾಳ—ತ್ರಿತಾಳ

ದತ್ತಗುರು ಅವತಾರ । ಅಘಹರ ದತ್ತಗುರು ಅವತಾರ ॥ ಪಲ್ಲ ॥
ದತ್ತದಿಗಂಬರ ಭಕ್ತಸುಖಂಕರ । ನಿತ್ಯಲೀಲೆಗಳಪಾರ । ಅಘಹರ ॥ ೧ ॥
ನಿತ್ಯನಿರಂಜನ ಅರಿಷಡ್ಭಂಜನ । ಮತ್ತೆ ಸಕಲಗುಣಸ್ಥಾನ । ಅಘಹರ ॥ ೨ ॥
ನರಹರಿವೇಷ ಸುರನರ ತೋಷಾ । ಕುರುಪುರದಲಿ ಸುಖವಾಸಾ ।
ಅಘಹರ ॥ ೩ ॥

— ಶ್ರೀ. ಹ. ರಾ. ದೇಸಾಯಿ, ಹುಬ್ಬಳ್ಳಿ

**ಔದುಂಬರನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು
ದತ್ತರಾಜಮಹಾರಾಜ ಕೀ ಜೈ !**

## ಭಜನ

**ಆರ್ತಭಕ್ತಿಗೆ ಒಲಿವಾತಾ ।
ಸ್ಮರ್ತೃಗಾಮಿಯು ಗುರುನಾಥಾ ॥**

## ಎರಡನೆಯ ಪ್ರದಕ್ಷಿಣೆ ಗುಡಿಯ ಸಮ್ಮುಖ

ಬೊಡ್ಡಾದತ್ತಿಯ ಬಡ್ಡಿ ಹೂತಿತು ಹಳೇ ಗೊಡ್ಡೆಮ್ಮೆ ಹೈನಾಯಿತು ।
ಸತ್ತಿದ್ದಾತನೆ ಎದ್ದ ತೊನ್ನ ತೊಗಲೂ ಹೊನ್ನಾಯ್ತು ಚಿನ್ನಾಯಿತು ॥
ಪ್ರೇತಕ್ಕೂ ಗತಿ ಪಂಡಿತಗರ್ಗು ಸುಮತೀ ಸೋತಾಕಿಗೂ ಸಂತತಿ ।
ಈ ಅತ್ಯದ್ಭುತವಾದವಾರ ದೆಶೆಯಿಂದಾತಂಗೆ ನಿತ್ಯಾ ನತೀ ॥ ೧೫ ॥
ಈ ಮೂರ್ತಿತ್ರಯ ಮಂಗಳಸ್ತುತಿಗಳೋಳ್ ವಿಶ್ವಾಸವಿಟ್ಟಂಥವಾ ।
ಇಲ್ಲೇ ಸರ್ವ ಸುಖಂಗಳಂ ಪಡೆಯುವಾ ನಿಶ್ಚೈಸಿ ಬ್ರಹ್ಮತ್ವವಾ ॥

ದತ್ತಾತ್ರೇಯನ ಸತ್ಯಮೂರ್ತಿಸುಲಭಾ ಸಂದರ್ಶನಾ ಇಂದಿಗೂ ।
ಸರ್ವಾತ್ಮಂಗಿದು ಸನ್ಮತಾ ನುತಿಪಥಾ ಯೋಗೀಶ್ವರೋಪಾಸ್ಯಗೂ ॥೯॥

—ಯೋಗೀಶ್ವರ ದತ್ತೂದೀಕ್ಷಿತರು, ಹುಬ್ಬಳಿ

## ಎರಡನೆಯ ಪ್ರದಕ್ಷಿಣೆ ಗುಡಿಯ ಸಮ್ಮುಖ

## ಕರುಣಾತ್ರಿಪದಿ

ಸಂತಯತೀ ಗುರುದತ್ತಾ । ನೀ । ಶಾಂತಗೊಳಿಸು ಮಮಚಿತ್ತಾ ಪಲ್ಲ
ಸರ್ವದಾ ಸುಜನ ಹಿತಕರ್ತಾ । ಸರ್ವಥಾ ನತಜನತ್ರಾತಾ ॥

ಭಯಕರ್ತಾ ನೀ ಭಯಹರ್ತಾ । ದಯೆತೋರಿಸು ಬಂದಿಹೆನಾರ್ತಾ ।
ನಿನ್ಹೊರತು ಇಲ್ಲೆನಗೆ ದಾತಾ ।
ನೀಯೆನ್ನವ ಕೇವಲ ತಾತಾ ।
ಸನ್ನುತನೇ ಜಗವಿಖ್ಯಾತಾ ।
ಮನ್ನಿಸುವದೀ ಭಿಕ್ಷೆ ಪೂತಾ । ನೀ ಶಾಂತಗೊಳಿಸು ಮಮ ಚಿತ್ತಾ ॥ ೧ ॥
ನಾನಿಹೆ ಪಾಪಿಯು ಮಹಾಘೋರಾ । ನಿನ್ನ ಧ್ಯಾನದೊಳಿಟ್ಟಿಹೆ ಭಾರಾ ॥
ನೀ ನಿರುತಲಿ ನಿರ್ವಿಕಾರಾ । ಎನ್ನ ತಥಾಪಿ ಮಾಡಲು ದೂರಾ ॥
ಬಳಿಕನ್ಯರಾರು ಆಧಾರಾ ।
ಮಮ ಸಾನುರಾಗ ವ್ಯಾಪಾರಾ ॥
ವರಗಾನದಿ ಈಕ್ಷಿಸು ಧೀರಾ ।
ಈ ದೀನನ ಮೊರೆ ಕೇಳುತ್ತಾ । ನೀ ಶಾಂತಗೊಳಿಸು ಮಮಚಿತ್ತಾ ॥ ೨ ॥
ಕಡು ಅಪರಾಧಿಯು ನಾನಿಹೆನು । ಎಂದೊಡನೆಯೇ ಈ ದೇಹಿಯನು ॥
ಎನ್ನೊಡೆಯನೆ ಮರೆಯದೆ ನೀನು । ಕಾಪಾಡೆಲೊ ವಂದಿಪೆ ನಾನು ॥
ನಡೆಯುವನು ಎಡವಿ ಬೀಳುವನು ।
ನೀ ತಡೆಯುತ ಮಹಾಕೋಪವನು ।
ಈ ಬಡವನ ಘನ ದೈನ್ಯವನು ।
ಗಡ ದೂಡೆಲೋ ಶ್ರೀ ಗುರುನಾಥಾ । ನೀ ಶಾಂತಗೊಳಿಸು ಮಮಚಿತ್ತಾ ॥ ೩ ॥

—ಹ. ರಾ. ದೇಸಾಯಿ, ಹಳೇಹುಬ್ಬಳ್ಳಿ

ಔದುಂಬರನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು
ದತ್ತರಾಜ ಮಹಾರಾಜಕೀ ಜೈ !

## ಭಜನಾ

**ಗುರುಹರಿ ಗುರುಹರ ಗುರುಬ್ರಹ್ಮಾ ಗುರುವೇ ಸಾಕ್ಷಾತ್ ಪರಬ್ರಹ್ಮ ||**

## ಮೂರನೆಯ ಪ್ರದಕ್ಷಿಣೆ ದಕ್ಷಿಣಕ್ಕೆ

### ಕರುಣಾತ್ರಿಪದಿ

ಶ್ರೀಗುರುದತ್ತಾ । ಜಯ ಭಗವಂತಾ । ನಿಷ್ಠುರ ಮಾಡದಿರೈ ನಿನ್ನ ಚಿತ್ತಾ
|| ಪಲ್ಲ ||

ಕಳ್ಳರು ವಲ್ಲಭೇಶನ ಕೊಂದಾಗ । ತಳಮಳಿಸಿದ ಮನ ಕಳವಲೀಗಾ || ೧ ||

ಕಂಡು ಹೊಟ್ಟೆಶೂಲ ದ್ವಿಜನ ಕಷ್ಟವನು । ಚಡಪಡಿಸಿದ ತೆರ
ನಿನಗಾಗದೇನು || ೨ ||

ಬ್ರಾಹ್ಮಣ ಕುವರನು ಮಡಿದಾಗ ಒಲಿದಾ । ಮನಕೆ ಉದಾಸೀನವೀಗೇಕೆ
ಒಲಿಯದಾ || ೩ ||

ಅನುವಾದಕರು, ಯೋಗೀಶ್ವರ ದತ್ತೂ ದೀಕ್ಷಿತರು, ಹುಬ್ಬಳ್ಳಿ

ಔದುಂಬರ ನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು
ಶ್ರೀ ದತ್ತರಾಜ ಮಹಾರಾಜ ಕೀ ಜೈ !

## ಭಜನ

**ಅತ್ರಿನಂದನಾ ದತ್ತಗುರೋ ।
ಭಕ್ತರ ಕಾಮ ಕಲ್ಪತರೋ ||**

## ಮೂರನೆಯ ಪ್ರದಕ್ಷಿಣೆ ಪಶ್ಚಿಮಕ್ಕೆ

### ಕರುಣಾ ತ್ರಿಪದಿ

ಜಯ ಕರುಣಾಘನ ಭಯನಿವಾರಣ । ದಯೆ ತೋರೋ ಎನ್ನೊಳು
ಅನಸೂಯಾನಂದನ || ಪಲ್ಲ ||

ಎನ್ನಪರಾಧವ ಮನ್ನಿಪುದೋ ದೇವ । ಮನದಿ ಭಾವವ ಧರಿಸುವೆ
ಪಾವನ || ೧ ||

ನೀ ಕರುಣಾಕರ ರಕ್ಷಿಪುದನುದಿನ । ಕಿಂಕರೊಳು ಕೋಪ ಬೇಡೈ
ಕೃಪಾಘನ || ೨ ||

ತಂದೆ ತಾಯಿಯು ನೀನೆ ಬಂಧುಬಳಗವು ನೀನೆ । ಬಂದ ಪರಿಹರಿಸಯ್ಯಾ
ಇಂದು ನೀ ವಾಮನಾ ॥ ೩ ॥

ಸುತನಪರಾಧವ ಮಾತೆಯು ಗಣಿಸಲ್ಕೆ । ತ್ರಾತರಾರ್ಕೈ ದೇವ ಭಕ್ತ
ಜನಜೀವನಾ ॥ ೪ ॥

ಭಕುತಿಯಿಂದಲಿ ಪ್ರಾರ್ಥಿಪ ವಾಸುದೇವಗೆ । ಮುಕುತಿಪಥವ ತೋರೋ
ದೇವಾ ಅತ್ರಿನಂದನಾ ॥ ೫ ॥

— ಅನುವಾದಕರು, ಶ್ರೀ ದತ್ತ ಭಕ್ತಮಂಡಲ, ಕುಕನೂರ.

ಔದುಂಬರ ನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ
ಸದ್ಗುರು ಶ್ರೀ ದತ್ತರಾಜ ಮಹಾರಾಜಕೀ ಜೈ !

## ಭಜನ

ದತ್ತನ ನಾಮವು ಅತಿಮಧುರಾ ।
ಚಿತ್ತಕೆ ಶಾಂತಿಯ ಅಧಾರಾ ॥

## ಮೂರನೆಯ ಪ್ರದಕ್ಷಿಣೆ ಉತ್ತರಕ್ಕೆ

## ಪದ

ರಾಗ—ತೋಡಿ ತಾಳ—ತ್ರಿತಾಳ

ಶ್ರೀಪಾದ ಶ್ರೀವಲ್ಲಭ ನರಹರಿ ತಾರಿ ತಾರಿಸೆನ್ನಾ ॥ ದಯಾಳಾ ।
ತಾರಿ ತಾರಿಸೆನ್ನಾ ॥ ಪಾಪಭಯದಿ ಬಹುತಾಪವ ಪೊಂದುತ ।
ಶರಣು ಬಂದೆ ನಿನ್ನಾ ॥ ಪಲ್ಲ ॥

ನಿರುತದಿ ಪ್ರಪಂಚದಾಟವು ನೋಟವು ತೋರುವದೋ ಮಿಥ್ಯಾ ॥
ದಯಾಳಾ । ತೋರುವದೋ । ಮಿಥ್ಯಾ ॥
ತ್ವರಿತದಿ ಗುರುವೆ ನಿನ್ನಯ ಭಜನೆ ತೋರಿತೆನಗೆ ಸತ್ಯ ॥ ೧ ॥
ಕಿಂಚಿತ್ ಕೃಪೆಯನು ಮಾಡೆನ್ನೊಳು ನೀ । ಉದಾರಮನದಿಂದ ॥
ದಯಾಳಾ । ಉದಾರಮನದಿಂದ ॥
ಸಂಚಿತಪಾಪವ ಕಳೆಯುತಿರ್ಪೆ ನೀ ಭಕುತಿ ಮಾರ್ಗದಿಂದ ॥ ೨ ॥

ಕೃಷ್ಣಾತೀರೌದುಂಬರ ನೆರಳಲಿ । ಸುಖದಲಿ ನೆಲಿಸಿರುವಾ ॥
ದಯಾಳಾ । ಸುಖದಲಿ ನೆಲಿಸಿರುವಾ ॥
ಶ್ರೇಷ್ಠ ಭಕ್ತಪ್ರಿಯ ಭಾರತಿ ನಿನ್ನಯ ಪಾದಮೊಳಿರುತಿರುವಾ ॥ ೩ ॥

— ಅನುವಾದಕರು, ಶ್ರೀದತ್ತ ಭಕ್ತಮಂಡಲ, ಕುಕನೂರ.

ಔದುಂಬರನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು
ಶ್ರೀ ದತ್ತರಾಜ ಮಹಾರಾಜಕೀ ಜೈ !

## ಭಜನಾ

ಸುಂದರರೂಪದ ಗುರುದತ್ತ ।
ವಂದನೆ ಗೈವೆವು ಭಗವಂತಾ ॥

## ಗುಡಿಯ ಸಮ್ಮುಖ

## ಪದ

(ಧಾಟಿ:— ಸಾಂಗಾವೆ ಕವಣಾಲಾಯೆ ಜಾವೆ)

ಭೂನಾಥಾ । ಅನಸೂಯಾ ನಿನ್ನ ಮಾತಾ । ಧೀವರ ಸದ್ಗುರುನಾಥಾ ॥
ತೋರಿಸು ನೀ ಸುಪಂಥಾ । ವಂದಿಸುವೆನು ನಿಜಭಕ್ತ ॥
ಸುಂದರಮೂರುತಿ ಸಂದರ್ಶನದಿ । ತಾರಿಸು ನಾ ಅನಾಥಾ ॥ ಪಲ್ಲವಿ ॥

ಅಪಾರ ಇರುವದು ಈ ಸಂಸಾರ । ಮೋಹಾದಿಗಳಿಂ ಪೂರಾ ॥
ನಂಬಿದೆ ನಿನ್ನವತಾರ । ತಾರಕ ಜಗದುದ್ಧಾರ ॥
ಚಂಚಲವಾದೀ ಮನವನು ನಿನ್ನಯ ಚರಣದಿ ನಿಲಿಸೋ ಸ್ಥಿರಾ ॥ ೧ ॥

ಸುನಾಮಾ । ಸ್ಮರಣದಿ ಶಾಂತಾರಾಮಾ । ಸುರವರಗಣ ಲಲಾಮಾ ॥
ನಿನ್ನದು ಮಂಗಲಧಾಮಾ । ನೀಡೆಲೋ ಭಕ್ತಗೆ ಪ್ರೇಮಾ ॥
ವಿಶ್ವಂಭರ ನೀ ಮಂದಮತಿಯು ನಾ । ತಿಮಿರಹಾರಿ ನೀ ಭಾಮಾ ॥ ೨ ॥

ಸುಶೀಲಾ । ಧರಿಸಿದಿ ನೀ ವನಮಾಲಾ । ಆನತ ಸಜ್ಜನ ಪಾಲಾ ॥
ಭಸ್ಮವಿಭೂಷಿತ ಭಾಲಾ । ಛೇದಿಸು ಬಂಧನ ಜಾಲಾ ॥
ಶ್ರೀಪಾದ ಶ್ರೀವಲ್ಲಭ ನೀಡೈ । ಅಭಯ ಜವದಿ ಜಗಪಾಲಾ ॥ ೩ ॥

—ಶ್ರೀ. ಹ. ರಾ. ದೇಸಾಯಿ, ಹುಬ್ಬಳ್ಳಿ

## ಆರತಿ ಪದ

ಶ್ರೀಪಾದಶ್ರೀವಲ್ಲಭ ಯತಿವರ ಭಗವನ್ನುರುಕೀರ್ತೇ । ನಾನಾನರಸುರವರ ಗಣ ಸಂಸ್ತುತ ಕರುಣಾಮಯ ಮೂರ್ತೇ ॥ ನಿತ್ಯಾನಂದ ಸಮಾಧಿಸಮಾಹಿತ ಮಾನಸಪರಿಪೂರ್ತೇ । ಮುನಿಜನ ಮಾನಸ ಹಂಸಪರಾತ್ಪರ ಜಯ ಜಯ ಗುರುಮೂರ್ತೇ ॥ ೧ ॥ ಸರ್ಗಸ್ಥಿತಿಲಯಕಾರಣ ಶಂಕರ ಪರಿಪೂರಿತ ಸ್ಫೂರ್ತೇ । ಚರಣಯುಗೆ ಭೂಸುರಗಣ ಪಾಲಕದಾರಿತ ಆವರ್ತೇ । ದುರಿತ ವಿನಾಶನ ಕೃಷ್ಣಾತಟವಿುಂ ವಿಹರಣ ಪರಿಪೂರ್ತೇ । ಕಲ್ಪತರು ಔದುಂಬರ ಛಾಯೆ ನಿಪಸಿಷ್ಟಾಪೂರ್ತೇ ॥ ೨ ॥ ಮಾಮತಿಕೃಪಣಮನಾಥಂ ಜೀವಯ ಭುವನವ್ಯಾವರತೇ । ಕರುಣಾಕರಮಾಮುದ್ಧರ ಪತಿತಂ ಗುರುಮಾಯಾವರ್ತೇ । ತತ್ಪದ ಶೇಖರ ತೀರ್ಥಂ ಸದ್ಗುರು ತತ್ಪದ ವ್ಯಾವರ್ತೇ । ಭಾರತಿ ನಾಯಕ ಯತಿ ಪ್ರತಿಪಾಲಯ ಭವಭಯ ಪಾಶಾರ್ತೇ ॥ ೩ ॥

## ಆರತಿ ಪದ ೨

ರಾಗ:— ಭೈರವಿ ತಾಳ:— ತ್ರಿತಾಳ

ದತ್ತರಾಜ ಮೂರ್ತೀ । ಆರತೀ । ಜ್ಞಾನಿ ಚಕ್ರವರ್ತೀ । ಜಯ ಜಯ ॥ ಪಲ್ಲ ॥
ಸಗುಣಸರೂಪಾ ಸುಂದರಾಕೃತೀ ॥ ಆತ್ಮಾನಂದರತೀ । ವಿಭೂತೀ ॥ ೧ ॥
ಬ್ರಹ್ಮಾನುಭವಾ ನಂದ ವಿಧಾತ್ರೀ । ಸತ್ಯ ಮಹಾಕೀರ್ತೀ । ಪ್ರತೀತೀ ॥ ೨ ॥
ಯೋಗೀಶ್ವರ ಭಾವಾಂತರ ವರ್ತಿ ॥ ಓಂ ಕೇವಲ ಸ್ಫೂರ್ತಿ । ಆ ಮೂರ್ತಿ ॥ ೩ ॥

## ಶ್ರೀ ದತ್ತಮೂರುತಿ ಅಷ್ಟಕ

ರಾಗ:— ಝಿಂಝೂಟಿ ತಾಳ:— ದಾದರಾ

ಧಾಟಿ:— ಗೋಪೀಗೀತ

ಅಮರವರ್ಗಕೆ, ಅಭಯ ಸಾರಿದಿ । ಮೂಲ ಸದ್ಗುರು ಪೀಠ ನಿಲಿಸಿದಿ ॥
ಅನಸುಯಾಸುತಾ; ನೀ ತ್ರಿಮೂರುತೀ । ಅತ್ರಿನಂದನಾ ದತ್ತಮೂರುತೀ ॥ ೧ ॥

ಪೀಠಾಪುರದೊಳು ವ್ಯೆಯ ತೋರ್ದವ । ಕುರವಪುರದೊಳು ನೆಲಸಿ ನಿಂತವ ॥
ಯೋಗಿರಾಜ ಶ್ರೀಪಾದಗುರುಪತಿ । ಅತ್ರಿನಂದನಾ ದತ್ತಮೂರುತಿ ॥ ೨ ॥

ಅಂಭೆ ಮಾಧವ ತನಯ ನರಹರೀ । ಕ್ಷೇತ್ರನಿನ್ನದು ಗಾಣಗಾಪುರೀ ॥
ಯತಿಪತೀ ನರ-ಸಿಂಹಸರಸ್ವತೀ । ಅತ್ರಿನಂದನಾ ದತ್ತಮೂರುತಿ ॥ ೩ ॥

ರಾಯರಂಕರು ನಿನ್ನ ದಾಸರು । ಬಡವಬಲ್ಲಿದ–ರೆಲ್ಲಭಕ್ತರು ||
ಸರ್ವಶಕ್ತ ನೀ ಜ್ಞಾನಿ ಕುಲಪತೀ । ಅತ್ರಿನಂದನಾ ದತ್ತಮೂರುತೀ || ೪ ||

ನಿನ್ನ ಚರಿತೆಯೂ, ವೇದಸಮಬಲ । ನಿನ್ನುಪಾಸನಾ ಸುಖದ ಸವಿಫಲಾ ||
ಸರ್ವಜನರಿಗೂ ನೀನೆ ಸದ್ಗತಿ । ಅತ್ರಿನಂದನಾ ದತ್ತಮೂರುತೀ || ೫ ||

ಯೋಗಿ ವೇಷವೋ ಭೋಗಿವೇಷವೋ । ಕಂಡ ಭಕ್ತರ–ದೆಂಥ ಭಾಗ್ಯವೋ ||
ಮನಕೆ ನಿಲುಕದಾ ಮಧುರಮಯ ಚೀತೀ || ಅತ್ರಿನಂದನಾ
ದತ್ತಮೂರುತಿ || ೬ ||

ಆರು ಕೈಗಳು, ಮೂರು ಮಸ್ತಕ । ಎರಡು ಕೈಗಳೂ, ಒಂದೆಯೇ ಮುಖಾ ।
ತ್ರಿಗುಣದೆರಕ ನೀ ವಿಶ್ವದಾಕೃತೀ । ಅತ್ರಿನಂದನಾ ದತ್ತಮೂರುತಿ || ೭ ||

ಕರ್ಮವೆಲ್ಲವೂ ನಿನ್ನುಪಾಸನಾ । ಭೋಗವೆಲ್ಲವೂ ನಿನ್ನ ಭಾವನಾ ||
ನೀಡು ನಿನ್ನೊಳು ಏಕರಸಮತಿ । ಅತ್ರಿನಂದನಾ ದತ್ತಮೂರುತಿ || ೮ ||

ಒಂದರಕ್ಷಣಾ, ನಿತ್ಯಸ್ಮರಣೆಯಾ । ದೈವ ಭಾವಿಕಾ ನಿತ್ಯನಿರ್ಭಯಾ ||
ಸೊಲ್ಲು ಸೊಲ್ಲಿಗೂ, ನಿನ್ನ ಕೀರುತೀ । ಹಾಡಿಕೊಳಲಿ ಯೋಗೀಶಭಾರತೀ || ೯ ||

—ಯೋಗೀಶ್ವರ ದತ್ತೂದೀಕ್ಷಿತರು

